## ಸಂಕಲನದ ಲೇಖಕರಿಗೆ + ಓದುಗರಿಗೆ ಕೆಲವು ಸೂಚನೆಗಳು

೧. ಲೇಖನಗಳ ಕೈಬರೆಹದ / ಟೈಪ್ ಮಾಡಿದ / ಡಿಟಿಪಿ ಮಾಡಿದ ಮೂಲ ಪ್ರತಿಗಳನ್ನೇ ಕಳಿಸಬೇಕು. ಝೆರಾಕ್ಸ್ ಪ್ರತಿ ಪರಿಶೀಲಿಸಲಾಗುವುದಿಲ್ಲ.

೨. ಲೇಖನಗಳು ಪ್ರಕಟಣೆಗೆ ಸ್ವೀಕೃತವಾದರೆ ಅವು ತಲುಪಿದ ೨ ತಿಂಗಳೊಳಗೆ ತಿಳಿಸಲಾಗುವುದು.

೩. ಸಂಕಲನದ ೧ ಸಂಚಿಕೆ ಪ್ರಕಟವಾಗುವಾಗ ಅದರ ಮುಂದಿನ ೩ ಸಂಚಿಕೆಗಳಿಗಾಗಿ ಆಯ್ದ ಲೇಖನಗಳು ಡಿಟಿಪಿ ಆಗಿ ಸಿದ್ಧವಾಗಿರುವುದರಿಂದ ಯಾವುದೇ ಹೊಸ ಲೇಖನ ಕನಿಷ್ಠ ನಾಲ್ಕಾರು ತಿಂಗಳ ನಂತರ ಪ್ರಕಟವಾಗುತ್ತದೆ. ಆದ್ದರಿಂದ ಲೇಖಕರು ಅನಗತ್ಯ ಕುತೂಹಲ ಅಥವಾ ಅವಸರ ತಳೆಯದಿರಲು ಕೋರಿಕೆ.

೪. ಉತ್ತರವನ್ನು ನಿರೀಕ್ಷಿಸಿ ಯಾರೂ ಸ್ವವಿಳಾಸದ ಲಕೋಟೆ ಅಥವಾ ಅಂಚೆಚೀಟಿ ಕಳಿಸುವುದು ಬೇಡ. ಕವಿತೆಗಳನ್ನು ಹೊರತುಪಡಿಸಿ ಅಸ್ವೀಕೃತ ಲೇಖನಗಳನ್ನು ಸಂಕಲನದ ವೆಚ್ಚದಲ್ಲಿಯೇ ಆಯಾ ಲೇಖಕರಿಗೆ ಮರಳಿಸಲಾಗುವುದು.

೫. ಪರಿಶೀಲನೆಗೆ ಪುಸ್ತಕದ ೨ ಪ್ರತಿ ಕಳಿಸಿದರೆ ಮಾತ್ರ ಪರಿಗಣಿಸಲಾಗುವುದು. ಎರಡು ಪ್ರತಿ ಸ್ವೀಕರಿಸಿದ ಮಾತ್ರಕ್ಕೆ ಅದರ ಪರಿಶೀಲನೆ ಮಾಡಿಸಲೇಬೇಕೆಂಬುದು ಸಂಕಲನಕ್ಕೆ ಬಂಧನಕಾರಿಯಲ್ಲ. ಒಮ್ಮೊಮ್ಮೆ ಪರಿಶೀಲಿತ ವಿಮರ್ಶಾಲೇಖನ ಪ್ರಕಟಣೆಗೆ ಸಿಗುವುದು ಅತಿ ವಿಳಂಬದ್ದೂ ಕಷ್ಟದ್ದೂ ಆಗಬಹುದಾಗಿದೆ.

೬. ಜನೆವರಿ, ಮಾರ್ಚ್, ಮೇ, ಜುಲಾಯಿ, ಸಪ್ಟಂಬರ್, ನವಂಬರ್ ೧೪ ರ ದಿನಾಂಕ ಹೊತ್ತು ಪ್ರಕಟವಾಗುವ ಸಂಚಿಕೆಗಳು ಸಕಾಲದಲ್ಲಿ ಚಂದಾಹಣ ಕೊಟ್ಟ ಎಲ್ಲರಿಗೂ ಸಾಮಾನ್ಯವಾಗಿ ಆಯಾ ತಿಂಗಳ ೧೦-೧೨ ನೇ ದಿನಾಂಕದೊಳಗಾಗಿ ತಲುಪುತ್ತವೆ.

೭. ಲೇಖಕರು ತಮ್ಮ ಒಳ್ಳೆಯ ಬರೆಹಗಳನ್ನು ಕಳಿಸುವುದರೊಂದಿಗೆ ತಮ್ಮ ಗಮನಕ್ಕೆ ಬರುವ ಹೊಸ ಲೇಖಕರ ಒಳ್ಳೆಯ ಲೇಖನಗಳನ್ನೂ ಸಂಕಲನಕ್ಕೆ ಕಳಿಸಲು ಪ್ರೇರೇಪಿಸಿರಿ.

೮. ಪ್ರಕಟವಾಗುವ ಪ್ರತಿಯೊಂದು ಲೇಖನಕ್ಕೆ ಸಾಂಕೇತಿಕ ಗೌರವಧನ ರೂ. ೧೦೦/- ಲೇಖನ ಪ್ರಕಟವಾದ ಎರಡು ವಾರದೊಳಗಾಗಿ ಕಳಿಸಲಾಗುವುದು.

೯. ಸಂಕಲನದ ವಾರ್ಷಿಕ ಚಂದಾ ರೂ. ೧೫೦/-

# ಸಂಕಲನ

ದ್ವೈಮಾಸಿಕ ಸಾಹಿತ್ಯ ಸಂಕಲನ

ಸಂಚಿಕೆ - ೧೪

೧೪ ಮಾರ್ಚ್ ೨೦೦೪

ಸಂಪಾದಕರು

ಸಿದ್ಧಲಿಂಗ ಪಟ್ಟಣಶೆಟ್ಟಿ

ಹೇಮಾ ಪಟ್ಟಣಶೆಟ್ಟಿ

ಸಂಕಲನ ಪ್ರಕಾಶನ

ಹೂಮನೆ, ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ - ೫೮೦ ೦೦೪

R N I No. KARKAN 14160 / 10 / 1 / 2002 - TC
SANKALANA :
A Kannada Literary Magazine
Volume 3, Issue 2 : 14 March 2004
Edited by Dr. Siddhaling Pattanshetti
Hoomane, Shridevinagar, Vidyagiri, Dharwad - 580 004

Yearly subscription : Rs. 150/-

Printed by Saraswati Offset Printers, Shivaji Road, Dharwad - 580 001

•
•
•

ಸಂಕಲನ - ೧೪ : ಸಂಪುಟ ೩, ಸಂಚಿಕೆ ೨ : ೧೪ ಮಾರ್ಚ್ ೨೦೦೪
ಸಂಪಾದಕರು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಮತ್ತು ಹೇಮಾ ಪಟ್ಟಣಶೆಟ್ಟಿ
ಹೂಮನೆ, ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ - ೫೮೦ ೦೦೪
✆ : ೦೮೩೬-೨೪೬ ೨೭೧೮

•

ಸಂಕಲನದಲ್ಲಿ ಪ್ರಕಟವಾದ ಲೇಖನಗಳಲ್ಲಿ ವ್ಯಕ್ತವಾದ
ಅಭಿಪ್ರಾಯಗಳ ಹೊಣೆ, ಹಕ್ಕು ಆಯಾ ಲೇಖಕರವು.

•

ವರ್ಷ ೨೦೦೪ ರಲ್ಲಿ ಪ್ರಕಟವಾಗುವ ಸಂಕಲನದ
ಆರು ಸಂಚಿಕೆಗಳ ಒಟ್ಟು ೪೯೨ ಪುಟಗಳ ಬೆಲೆ ರೂ. ೧೫೦/-
ಚಂದಾ ಹಣವನ್ನು ಮನಿಆರ್ಡರ್ ಇಲ್ಲವೆ ಕ್ರಾಸ್ ಮಾಡಿದ ಡಿ. ಡಿ. ಮೂಲಕ
ಸಂಕಲನ ಅಥವಾ ಸಂಪಾದಕರ ಹೆಸರಿಗೆ ಕಳಿಸುವುದು.
ಚೆಕ್ ಕಳಿಸುವುದಾದಲ್ಲಿ ಬ್ಯಾಂಕ್ ಕಮೀಶನ್ ರೂ. ೨೦/- ಹೆಚ್ಚಿಗೆ ಸೇರಿಸುವುದು.

•

ಡಿಟಿಪಿ : ಬಿಜಿಗ್ರಾಫಿಕ್ಸ್, ೧ನೇ ಮೇನ್, ವಿಜಯನಗರ, ಧಾರವಾಡ - ೫೮೦ ೦೦೩

# ಸಂಪಾದಕರ ಮಾತು

ಸಂಕಲನದ ಈ ಸಂಚಿಕೆಯಲ್ಲಿ 'ನನ್ನ ಅವ್ವ ನನ್ನ ಅಪ್ಪ' ಮಾಲಿಕೆಯಲ್ಲಿ ಎರಡು ಲೇಖನಗಳನ್ನು ಪ್ರಕಟಿಸುತ್ತಿದ್ದೇವೆ. ಈ ಮಾಲಿಕೆಯ ಲೇಖನಗಳನ್ನು ಕುತೂಹಲ ಆಸಕ್ತಿ ಆತ್ಮೀಯತೆಗಳೊಂದಿಗೆ ಓದುತ್ತಿರುವ ಮಿತ್ರರ ಆಗ್ರಹದ ಮೇರೆಗೆ ಆಗಾಗ ಇಂಥ ಹೆಚ್ಚು ಲೇಖನಗಳನ್ನು ಪ್ರಕಟಿಸಲು ನಿರ್ಧರಿಸಿದ್ದೇವೆ.

'ನನ್ನ ಅವ್ವ ನನ್ನ ಅಪ್ಪ' ಮಾಲಿಕೆಗಾಗಿ ಓದುಗ ಮಿತ್ರರು ತಮ್ಮ ಪ್ರಾಮಾಣಿಕ ವಿಶಿಷ್ಟ ಆಪ್ತ ಅನುಭವಗಳನ್ನು ಬರೆದು ಸಂಕಲನಕ್ಕೆ ಕಳಿಸುವಾಗ ಅವು ಮುದ್ರಣದಲ್ಲಿ ೮-೧೦ ಪುಟಗಳ ಮಿತಿ ದಾಟದಂತೆ ಬರೆದರೆ ಅನುಕೂಲ.

ಭಾಸ ಮಹಾಕವಿಯ ರಾಮಾಯಣ ವಿಷಯಕ ನಾಟಕಗಳಾದ 'ಅಭಿಷೇಕ', 'ಪ್ರತಿಮಾ' ಹಾಗೂ 'ಯಜ್ಞಫಲ'ಗಳಲ್ಲಿ 'ಯಜ್ಞಫಲ'ವನ್ನು ಕುರಿತು ಒಂದು ವಿಶಿಷ್ಟ ಲೇಖನವನ್ನು ಈ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ. ಭಾಸನ ನಾಟ್ಯರಚನಾ ಕೌಶಲ ಯುಗ-ಯುಗಗಳಿಗೆ, ದೇಶ-ಪ್ರದೇಶಗಳಿಗೆ, ವ್ಯಕ್ತಿ-ಸಮಾಜಗಳಿಗೆ ನಿತ್ಯನೂತನ ವೆನಿಸುವಂಥ ಬೆಳಕು ತೋರಿಸುವ ಸಾಮರ್ಥ್ಯದ ಬರವಣಿಗೆ. ರಾಮಾಯಣ ವಿಷಯದ ತ್ರಿವಳಿಯ ಇನ್ನುಳಿದ 'ಅಭಿಷೇಕ' ಹಾಗೂ 'ಪ್ರತಿಮಾನಾಟಕ'ಗಳನ್ನು; ಮತ್ತು ಮಹಾಭಾರತ ಕಥೆಯನ್ನು ಅವಲಂಬಿಸಿದ ಷಟ್‌ಚಕ್ರನಾಟಕಗಳಾದ 'ಪಂಚರಾತ್ರ', 'ಮಧ್ಯಮವ್ಯಾಯೋಗ', 'ದೂತವಾಕ್ಯ', 'ದೂತಘಟೋತ್ಕಚ', 'ಕರ್ಣಭಾರ', 'ಊರುಭಂಗ'ಗಳನ್ನು; ಮತ್ತು ಶೂದ್ರಕನ 'ಮೃಚ್ಛಕಟಿಕ'ಕ್ಕೆ ಪ್ರಾಣಪ್ರೇರಣೆ ನೀಡಿದ ಭಾಸನ ಬೃಹತ್ಕಥಾ ಮೂಲದ 'ದರಿದ್ರ ಚಾರುದತ್ತ' ಹಾಗೂ ಉದಯನ ಕಥಾಶ್ರೇಣಿಯಲ್ಲಿ ಹೆಣೆದ 'ಸ್ವಪ್ನವಾಸವದತ್ತಾ', 'ಪ್ರತಿಜ್ಞಾಯೌಗಂಧರಾಯಣ', 'ಅವಿಮಾರಕ'; ಮತ್ತು ಭಾಗವತ ವಿಷಯದ 'ಬಾಲಚರಿತ'ಗಳ ಅಧ್ಯಯನ ಸಹ ಆಧುನಿಕ ಜಗತ್ತಿನ ರಾಜ-ನೀತಿಯ ವಿಶ್ಲೇಷಣೆಗೆ ವಿಶೇಷವಾಗಿ ನೆರವಾಗಬಲ್ಲುದು.

ಭಾಸನ ವಿಶಿಷ್ಟ ಜೀವನಾನುಭವಗಳ ಹಿನ್ನೆಲೆಯಲ್ಲಿ ರಚಿತವಾಗಿರುವ ಈ ಎಲ್ಲ ನಾಟಕಗಳನ್ನು ಹೊಸದಾಗಿ ನಿರ್ದೇಶಿಸಿ ರಂಗಕ್ಕೆ ತರುವ ನಿಟ್ಟಿನಲ್ಲಿ ಸಹ ರಂಗಾಸಕ್ತರು ಯೋಚಿಸುವಂತಾಗಬೇಕು.

'ಮಕ್ಕಳ ನಾಟಕ' ಎಂಬ ಹೆಸರಿನಲ್ಲಿ ಪ್ರಕಟವಾಗುತ್ತಿರುವ ಈ ಸಲದ 'ಚಾಳೀ ಠೂ! ಪಾಲಾ ಪೂ!'ದ ವೈಶಿಷ್ಟ್ಯದ ಬಗ್ಗೆ ಬೇರೆ ಹೇಳಬೇಕಾಗಿಲ್ಲ.

ಸಿದ್ಧಲಿಂಗ ಪಟ್ಟಣಶೆಟ್ಟಿ
ಹೇಮಾ ಪಟ್ಟಣಶೆಟ್ಟಿ

೧ ಮಾರ್ಚ್ ೨೦೦೪
ಹೂಮನೆ, ಧಾರವಾಡ-೪

# ಪರಿವಿಡಿ

# ನನ್ನ ಅಮ್ಮ ನನ್ನ ಅಯ್ಯ

ರೇಖಾ ವಿಷ್ಣುಮೂರ್ತಿ

ನಮ್ಮ ಬಾಲ್ಯದ ದಿನಗಳಲ್ಲಿ ಏಕತಾನತೆಯಿಂದ ಕೂಡಿದ ಜಂಜಾಟವಿಲ್ಲದ ದಿನಗಳನ್ನು ಕಳೆಯುವುದು ಒಂದೊಂದು ಸಲ ಬೋರ್ ಅನಿಸುತ್ತಿತ್ತು. ಆದರೆ ಈಗ ದಿನ ಬೆಳಗಾದರೆ ಎದುರಾಗುವ ಸಮಸ್ಯೆಗಳು, ಸಮಯದ ಅಭಾವ, ಹಿರಿಯರಿಲ್ಲದ ಎಲ್ಲದಕ್ಕೂ ನಾವೇ ಜವಾಬ್ದಾರಿಯಾಗುವ ವಾತಾವರಣದಲ್ಲಿ ಆ ದಿನಗಳನ್ನು ಮೆಲುಕು ಹಾಕುವುದರಲ್ಲಿ ಸುಖವಿದೆ.

ನಾನು Jane Austin ಪುಸ್ತಕಗಳನ್ನೋದುವಾಗ ನಮ್ಮ ಬಾಲ್ಯ ನೆನಪಿಗೆ ಬರುತ್ತದೆ. S.S.L.C. ವರೆಗೆ ಯಾವುದೆ ಒತ್ತಡವಿಲ್ಲದೆ ಆರಾಮವಾಗಿ ಕಾಲ ಕಳೆಯುತ್ತಿದ್ದೆವು. ರಜಾ ದಿನಗಳಲ್ಲಿ ನೆಂಟರು ನಮ್ಮ ಮನೆಗೆ ಬಂದು ವಾರಗಟ್ಟಳೆ ಇರುವ ಸಂಭ್ರಮ. ನಾವು ಅವರ ಮನೆಗೆ ಹೋಗುವಾಗ ನಡೆಸುವ ತಯಾರಿ ಈಗ ಬರಿ ನೆನಪಷ್ಟೇ. ಈ ನೆನಪನ್ನು ಬರವಣಿಗೆಯ ಮೂಲಕ ಬರುವಂತೆ ಮಾಡಿದ ಸಂಕಲನದ ಸಂಪಾದಕರಿಗೆ ನನ್ನ ಪ್ರೀತಿಯ ಕೃತಜ್ಞತೆಗಳು.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿರುವ ಕೂಡಿಗೆ ನನ್ನ ತಂದೆ ಗುರಪ್ಪಗೌಡರ ಮೂಲ ಊರು. ನಂತರ ನೆಲೆಸಿದ್ದು ಹಿರೇತೋಟ. ತಂದೆಯ ತಂದೆ ತಿಮ್ಮೇಗೌಡರು ವೃತ್ತಿಯಲ್ಲಿ ಜಮೀನ್ದಾರನಾಗಿದ್ದರು. ಪ್ರವೃತ್ತಿಯಲ್ಲಿ ಮಣೆಗಾರರು, ಸರ್ಕಾರದ ವತಿಯಿಂದ ತೂಕ ಅಳತೆಯ ಅಧಿಕಾರಿ. ನಮ್ಮಜ್ಜ ಹಿಂದಿನವರ ಹಾಗೇ ಹಣಕಾಸಿನಲ್ಲಿ ಬಹಳ ಎಚ್ಚರಿಕೆ. ಮನೆಯಲ್ಲಿ ಎಲ್ಲರೂ ಕಾಫಿ ಕುಡಿದರೆ ಖರ್ಚು ಬಹಳ ಬರಬಹುದೆಂದು ಕೊತ್ತಂಬರಿ ಕಷಾಯ ಕುಡಿಯಬೇಕೆಂಬ ಅವರ ಸುಗ್ರೀವಾಜ್ಞೆಗೆ, ಮನೆಯವರು ಅವರೊಬ್ಬರಿಗೆ ಕಷಾಯ ಕೊಟ್ಟು ತಾವು ಕಾಫಿ ಕುಡಿಯುತ್ತಿದ್ದರು. ನೆಂಟರು ಬಂದಾಗ ಅವರ ಯೋಗಕ್ಷೇಮ ವಿಚಾರಿಸಿ ಊಟ ಮುಗಿಸಿ ಸಂಜೆಯೊಳಗೆ ಮನೆ ಸೇರಬೇಕೆಂದು ತಾಕೀತು ಮಾಡುತ್ತಿದ್ದರು. ನೆಂಟರು ಅವರಿಗೆ ಕಾಣದ ಹಾಗೆ ತಿಂಗಳುಗಟ್ಟಳೆ ಇರುತ್ತಿದ್ದರು. ೩-೪ ದಿನ ಬಿಟ್ಟು ಅಜ್ಜನನ್ನು ನೋಡಿದಾಗ ಅದೇ ಉಪದೇಶ. ಅಜ್ಜನಿಗೆ ತುಂಬಾ ಮರೆವು. ಯಾವುದೂ ನೆನಪಿರುತ್ತಿರಲಿಲ್ಲ. ನಮ್ಮ ತಂದೆ ಮನೆಗೆ Ford Car ತಂದಾಗ ಅದರ ಬೆಲೆ ಮೂರು ಸಾವಿರ. ಅವರು ತಮ್ಮ ತಂದೆಗೆ ಕೇವಲ ನೂರು ರೂಪಾಯಿಗಳೆಂದು ಸುಳ್ಳು ಹೇಳಿದ್ದರಂತೆ. ಈ ಕಥೆಗಳನ್ನೆಲ್ಲಾ ಹೇಳಿ ತಂದೆ ನಮ್ಮನ್ನೆಲ್ಲಾ ರಂಜಿಸುತ್ತಿದ್ದಾಗ ನಾನು ನನ್ನ ತಮ್ಮ ಮಹೇಶ್ ಕಳಿಸುತ್ತಿದ್ದ ಹಾಸ್ಟೆಲ್ ಬಿಲ್ ನೆನೆಸಿಕೊಂಡು ಮನಸ್ಸಿನಲ್ಲಿಯೇ ನಗುತ್ತಿದ್ದೆ. ಬಿಲ್ಲಿನ ವಿವರ ಹೀಗಿರುತ್ತಿತ್ತು– ಪುಸ್ತಕ, ಹಣ್ಣು, ಧೋಬಿ, ಔಷಧಿ, ಇಂಕು ಇತ್ಯಾದಿ ಇತ್ಯಾದಿ. ಮಧ್ಯದಲ್ಲಿ ಮತ್ತೆ ಧೋಬಿ– ಹೀಗೆ ಅಗತ್ಯಕ್ಕಿಂತ ಸ್ವಲ್ಪ ಜಾಸ್ತಿ ಹಣ ತರಿಸುತ್ತಿದ್ದ ರೀತಿ ನಗು ಉಕ್ಕಿಸುತ್ತಿತ್ತು. ಅವನ ಇನ್ನೊಂದು ತಮಾಷೆಯ ವಿಷಯ ಡೈರಿ ಬರೆಯುವುದು. ರಾಮಕೃಷ್ಣ ಆಶ್ರಮದಲ್ಲಿ ರಜದಲ್ಲಿ ಪ್ರತಿಯೊಬ್ಬರು ಡೈರಿ ಬರೆಯಬೇಕೆಂಬ ಸ್ವಾಮೀಜಿಯ ಕಟ್ಟಪ್ಪಣೆಗೆ ಮುಂದಿನ ದಿನಗಳ ದಿನಚರಿಯನ್ನು ಹಿಂದಿನ ದಿನವೇ ಬರೆದು ಮುಗಿಸುತ್ತಿದ್ದ.

ದೇವಂಗಿ ನಮ್ಮ ಅಮ್ಮ ರತ್ನಮ್ಮನ ಊರು. ಹಿರೇತೋಟದಿಂದ ಹತ್ತು ಹದಿನೆರಡು ಮೈಲಿಯ ಅಂತರ. ತಂದೆ ತಿಮ್ಮಣ್ಣಗೌಡರು, ತಾಯಿ ತಿಮ್ಮಮ್ಮ, ಅಮ್ಮನ ಅಕ್ಕ ಸರಸ್ವತಮ್ಮ, ತಮ್ಮಂದಿರು ನಾಗೇಶ್, ಚಂದ್ರಶೇಖರ್. ದೇವಂಗಿ ಚಂದ್ರಶೇಖರ್ ಆಗಿನ ಕಾಲದಲ್ಲಿ ಮೈಸೂರು ಮಲ್ಲಿಗೆ ಕವನಗಳನ್ನು ತಮ್ಮ ಕಂಚಿನಕಂಠದಲ್ಲಿ ಸೊಗಸಾಗಿ ಹಾಡುತ್ತಿದ್ದರು. ಅವರ ತಮ್ಮ ನಾಗೇಶ್ ಕಾಲೇಜಿನಲ್ಲಿ ಓದುತ್ತಿದ್ದಾಗ ಅಣ್ಣನ ರೀತಿಯೇ ಹಾಡಬಹುದೆಂದು ಅವರ ಸ್ನೇಹಿತರು ಹಾಡಲು ಕೋರಿದಾಗ, ನಾಗೇಶ್ ಭಂಡ ಧೈರ್ಯದಿಂದ ಕೆಟ್ಟ ರಾಗದಲ್ಲಿ ಹಾಡಿದಾಗ ಸ್ಟೇಜಿನಿಂದ ಓಡಿಸಿದರಂತೆ.

ನಮ್ಮಜ್ಜಿ ತುಂಬಾ ಸೌಮ್ಯ. ದೇವರಲ್ಲಿ ಅಪಾರ ಭಕ್ತಿ. ರಾಮಕೃಷ್ಣ ಪರಮಹಂಸರನ್ನು ಕುರಿತು ಹೇಳುತ್ತಿದ್ದ "ಬಾ ಶ್ರೀ ಗುರುದೇವನೆ ಬಾ" ಎಂಬ ಭಕ್ತಿಗೀತೆ ಕೇಳುವವರನ್ನು ಪರವಶ ಗೊಳಿಸುತ್ತಿತ್ತು. ನಮಗೆಲ್ಲಾ ಶನಿವಾರ ಬಂತೆಂದರೆ ದೇವರಲ್ಲಿ ಬಹಳ ಆಸಕ್ತಿ. ಕಾರಣ ಸಿಗುತ್ತಿದ್ದ ರುಚಿರುಚಿಯಾದ ಪ್ರಸಾದ. ನಮ್ಮಜ್ಜನ ಸ್ವಭಾವ ತುಂಬಾ ಧಾರಾಳ. ತಿಮ್ಮಮ್ಮನ ಶಾಂತ ಸ್ವಭಾವ ದೊಡ್ಡಮ್ಮನಿಗೆ ಬಂದರೆ ಅಜ್ಜನ ಧಾರಾಳತನ ಅಮ್ಮನಿಗೆ ಬಂತು. ಅಜ್ಜ ಎಲೆ ಅಡಿಕೆ ಹಾಕಿ ಸಿಗರೇಟು ಹಚ್ಚುವುದನ್ನು ನೋಡುವುದೇ ನಮಗೆಲ್ಲಾ ಮೋಜಿನ ವಿಷಯವಾಗಿತ್ತು. ಅಡಿಕೆ ಪುಡಿ ಮಾಡುವುದು ಡ್ರೈವರ್ ಶಾಮಣ್ಣನ ಕೆಲಸ. ಅದಕ್ಕೆ ಹದವಾಗಿ ಕೊಬ್ಬರಿ ಸಕ್ಕರೆ ಬೆರೆಸುವುದು ತಿಮ್ಮಮ್ಮನ ಕೆಲಸ. ಅದನ್ನು ಮೆಲ್ಲುವುದು ಅಜ್ಜನ ಕೆಲಸ. ಶಾಮಣ್ಣನ ಇನ್ನೊಂದು ಕೆಲಸವೆಂದರೆ ಚಂದಮಾಮ ಪುಸ್ತಕದಿಂದ ಮಕ್ಕಳಿಗೆ ಕಥೆ ಓದಿ ಹೇಳುವುದು. ಹಾಗಾಗಿ ನನಗೆ ಕಥೆ ಪುಸ್ತಕ ಓದುವ ಗೀಳು ಅಂಟಿತು. ಒಂದು ರೀತಿಯಲ್ಲಿ ಅವನೇ ನನ್ನ ಮೊದಲ ಗುರುವೆನ್ನಬಹುದು.

ನಾವು ತಂದೆಯನ್ನು ಅಯ್ಯಾ ಎಂದೇ ಕರೆಯುತ್ತಿದ್ದೆವು. ಅಯ್ಯಾ ಎಂದಾಗ ನೆನಪಿಗೆ ಬರುವುದು ಅವರ ನಗುಮುಖ, ಸರಳ ಬಿಳಿ ಉಡುಗೆ. ಹೊರಗಡೆ ಹೋಗುವಾಗ ಖಾದಿ ಕೋಟು, ಟೋಪಿ, ಮುಂದಿನ ದಿನಗಳಲ್ಲಿ ಟೋಪಿ ಮಾಯವಾಗಿ ಖಾದಿ ಕೋಟು ಉಣ್ಣೆ ಕೋಟಿಗೆ ಪರಿವರ್ತನೆಗೊಂಡಿತು. ಇದು ಅಯ್ಯನಿಗೆ ಇಷ್ಟವಿತ್ತೊ ಇಲ್ಲವೊ... ಇದಕ್ಕೆ ಕಾರಣ ನಮ್ಮ ದೊಡ್ಡಕ್ಕ ವಿಜಯಕ್ಕ. ಅವರಲ್ಲಿ ತಂದೆಗೆ ಅತೀವ ಪ್ರೀತಿ. ಹಾಗಾಗಿ ಅವರ ಪ್ರೀತಿಯ ಗದರಿಕೆಗೆ ತಂದೆ ತಲೆಬಾಗುತ್ತಿದ್ದರು. ಅಕ್ಕ ನಮಗೆಲ್ಲಾ ಮಾದರಿ ವ್ಯಕ್ತಿಯಾಗಿದ್ದರು. ಅವರ ಮಾತನ್ನು ನಾವೆಲ್ಲಾ ಪರಿಪಾಲಿಸುತ್ತಿದ್ದೆವು. ಅವರಿಂದ ನಾನೆಷ್ಟೊ ಕಲಿತಿದ್ದುಂಟು.

ತಂದೆಯ ಉಡುಗೆ ಎಷ್ಟು ಸರಳವೊ ಅದಕ್ಕೆ ವ್ಯತಿರಿಕ್ತವಾಗಿರುತ್ತಿತ್ತು ಅಮ್ಮ ಕೊಳ್ಳುತ್ತಿದ್ದ ವೈವಿಧ್ಯಮಯ ಸೀರೆಗಳು. ಆದರೆ ಕೆಲವೊಮ್ಮೆ ಅವಸರದಲ್ಲಿ ಕೊಂಡ ಸೀರೆಗಳು ಬಂದಷ್ಟೇ ವೇಗದಲ್ಲಿ ದಾನದ ರೂಪದಲ್ಲಿ ಅಥವಾ ಕಾಣಿಕೆಯಾಗಿಯೊ ಬೇರೆಯವರಿಗೆ ಕೊಡಲ್ಪಡುತ್ತಿದ್ದವು. ಇದೇ ಗತಿ ಅವರು ಧರಿಸುತ್ತಿದ್ದ ರವಿಕೆ ಮತ್ತು ಅದನ್ನು ಹೊಲಿಯುತ್ತಿದ್ದ ದರ್ಜಿಗೂ. ಈ ವರ್ಷ ಅತಿಯಾಗಿ ಹೊಗಳಲ್ಪಟ್ಟ ದರ್ಜಿ ಮರು ವರ್ಷವೆ ಬದಲಾಗುತ್ತಿದ್ದ. ಈ ಗುಣ ಮಕ್ಕಳಿಗೆ, ಮೊಮ್ಮಕ್ಕಳಿಗೆ ಬಂದಿದೆ. ಅದರಲ್ಲೂ ಅಕ್ಕನ ಮಗಳು ನಿವೇದಿತಾಳಿಗೆ ಜಾಸ್ತಿ.

ಅಮ್ಮ ಮದುವೆ ಅಥವಾ ಇತರೆ ಸಮಾರಂಭಗಳಿಗೆ ಹೋಗುವಾಗ ನಡೆಸುವ ಸಿದ್ಧತೆ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ತಿಂಗಳ ಮೊದಲೇ ಬಟ್ಟೆ ಇಸ್ತ್ರಿಯಾಗಿ ಬ್ಯಾಗಿನಲ್ಲಿ ಕುಳಿತಿರುತ್ತಿತ್ತು. ನಮ್ಮ ಊರಿನಲ್ಲಿ ಧೋಬಿ ಇದ್ದರೂ ಅಮ್ಮ ಅದನ್ನು ಒಪ್ಪದಿದ್ದ ಕಾರಣ ತೀರ್ಥಹಳ್ಳಿಯಿಂದ ಹುಡುಗನನ್ನು ಕಳಿಸಿ ಇಸ್ತ್ರಿ ಮಾಡಿಸಿ ತರಿಸುತ್ತಿದ್ದರು. ಇದರ ಬಗ್ಗೆ ನ ಎನೊಮ್ಮೆ ತಮಾಷೆ ಮಾಡಿದೆ, ಅಮ್ಮ, ನೀನು ನೆಹರೂ ವಂಶದಲ್ಲಿ ಹುಟ್ಟಬೇಕಿತ್ತು ಎಂದು. ದಂತಕಥೆಯ ಪ್ರಕಾರ ನೆಹರೂಗೆ ಪ್ಯಾರಿಸ್‌ನಿಂದ ಬಟ್ಟೆ ಇಸ್ತ್ರಿಯಾಗಿ ಬರುತ್ತಿತ್ತಂತೆ. ಅಮ್ಮನ ಹತ್ತಿರ ಅಷ್ಟು ಹಣವಿದ್ದಿದ್ದರೆ ಹಾಗೇ ಮಾಡುತ್ತಿದ್ದರು. ನನಗೆಂದೂ ಅಮ್ಮನ ಶಿಸ್ತು ಬರಲಿಲ್ಲ. ಎಲ್ಲಿಗಾದರೂ ಹೊರಡುವಾಗ ಇಸ್ತ್ರೀ ಪೆಟ್ಟಿಗೆ ಹುಡುಕುತ್ತಿರುತ್ತೇನೆ. ಕರೆಂಟ್ ಕೈ ಕೊಟ್ಟರೆ ದೇವರೇ ಗತಿ.

ನಾವು ಚಿಕ್ಕವರಿದ್ದಾಗ ಒಟ್ಟಾಗಿದ್ದ ಕುಟುಂಬ ಮುಂದಿನ ದಿನಗಳಲ್ಲಿ ಬೇರಾಯಿತು.

ಸಮ್ಮತಿಯಿರಲಿಲ್ಲ. ಕೊನೆಪಕ್ಷ ಹಳೇ ಮನೆಗೆ ಒಂದೆರಡು ಕೊಠಡಿಗಳನ್ನು ಸೇರಿಸಬೇಕೆಂಬ ಹೊಸ ಖರ್ಚಿಗೆ ಅಯ್ಯ ಒಪ್ಪುತ್ತಿರಲಿಲ್ಲ. ಈ ವಿಷಯವಾಗಿ ಅನೇಕ ಬಾರಿ ಚರ್ಚೆ ನಡೆಸಿದಾಗ ಅವಿರೋಧ ಪಕ್ಷದಲ್ಲಿ ಅಯ್ಯ ಒಂಟಿ, ಮಕ್ಕಳೆಲ್ಲಾ ಅಮ್ಮನ ಕಡೆ. (ಅದರಲ್ಲಿ ಹೆಣ್ಣುಮಕ್ಕಳದ್ದೇ. ಮೇಲುಗೈ.) ವಿಷಯ ವಿಕೋಪಕ್ಕೆ ಹೋದಾಗ ಅಯ್ಯ ಹಾಡನ್ನು ಗುನುಗುನಿಸುತ್ತಾ ಎದ್ದು ಹೋದಾಗ ಸೋಲುವ ಸರದಿ ನಮ್ಮದು. ವಿತ್ತಮಂತ್ರಿ ಅಯ್ಯನೇ ಆಗಿದ್ದರಿಂದ ನಾವೇನು ಮಾಡುವ ಹಾಗಿರಲಿಲ್ಲ. ಇದೊಂದು ರೀತಿಯ ಪಲಾಯನವಾದವಾದರೂ ಜೀವನದಲ್ಲಿ ಶತ್ರುಗಳನ್ನು ಗೆಲ್ಲುವ ಮಾರ್ಗ ಕಲಿತೆ. ಆಡಳಿತ ಪಕ್ಷ ಈ ಸೂತ್ರ ಅನುಸರಿಸಿದರೆ ವಿರೋಧಪಕ್ಷವನ್ನು ಒಮ್ಮೊಮ್ಮೆ ಸೋಲಿಸಬಹುದು.

ಅಯ್ಯನ ತಾಯಿ ಚಿಕ್ಕಂದಿನಲ್ಲಿಯೇ ತೀರಿಹೋಗಿದ್ದರಿಂದ ನಮ್ಮಜ್ಜನಿಗೆ ಮರು ಮದುವೆಯಾಯಿತು. ಆಗಿನ ಮಲೆನಾಡಿನಲ್ಲಿ ಮಲೇರಿಯಾ, ರಕ್ತಹೀನತೆ, ಹೆರಿಗೆಯಲ್ಲಿ ಸಾವು ಸಹಜವಾಗಿತ್ತು. ತಂದೆ ತಮ್ಮ ಬಲಸಹೋದರ, ಸಹೋದರಿಯರಲ್ಲಿ ಎಂದೂ ಭೇದವೆಣಿಸಲಿಲ್ಲ. ಅವರ ತಂಗಿ ಕಮಲಾಕ್ಷಮ್ಮ ಮತ್ತು ಅಣ್ಣನ ಮಗಳು ತುಳಸಮ್ಮನಿಗೆ ಅಯ್ಯನನ್ನು ಕಂಡರೆ ಅಪಾರ ಪ್ರೀತಿ, ಗೌರವ. ಆಗಿನ ಒಟ್ಟು ಕುಟುಂಬದಲ್ಲಿ ಎಲ್ಲಾ ಮಕ್ಕಳನ್ನು ತಮ್ಮ ಸ್ವಂತ ಮಕ್ಕಳಂತೆ ಕಾಣುತ್ತಿದ್ದರು. ಇದಕ್ಕೆ ಉದಾ : ನಮ್ಮ ದೊಡ್ಡಪ್ಪನ ಅಣ್ಣನ ಹೆಂಡತಿ ಸುಭಾಷಿಣಿ. ಅವರು ನಮ್ಮನ್ನೆಲ್ಲಾ ತಮ್ಮ ಮಕ್ಕಳಂತೆ ಸಾಕಿ ಸಲಹಿದರು. ಹಾಗೆಯೇ ನಮ್ಮ ಚಿಕ್ಕಮ್ಮ ಮತ್ತು ಇನ್ನೊಬ್ಬ ಅತ್ತಿಗೆ ನಮ್ಮನ್ನೆಲ್ಲಾ ಪ್ರೀತಿಯಿಂದ ನೋಡಿಕೊಂಡರು. ಕಮಲಾಕ್ಷಮ್ಮ ನಮ್ಮ ಪ್ರೀತಿಯ ಸೋದರತ್ತೆ ಯಾಗಿದ್ದರು. ಅವರ ಮನೆಗೆ ಹೋಗುವುದೆಂದರೆ ನಮಗೆಲ್ಲಾ ಹಬ್ಬ. Ford Car ನಲ್ಲಿ ಎಲ್ಲರೂ ತುಂಬಿಕೊಂಡು ಹೋಗುತ್ತಿದ್ದ ನಮಗೆ ಉಪಚಾರವೋ ಉಪಚಾರ. ಎಲ್ಲರೊಂದಿಗೂ ಹೊಂದಿಕೊಂಡು ಹೋಗುವ ಸಮಾಧಾನದ ವ್ಯಕ್ತಿತ್ವ. ನಮ್ಮಕ್ಕ ತುಳಸಮ್ಮ ಬಹು ತೂಕದ ವ್ಯಕ್ತಿ. ಯಾರ ಮನಸ್ಸನ್ನು ನೋಯಿಸದೆ ಎಲ್ಲರನ್ನು ಒಂದೇ ರೀತಿಯಲ್ಲಿ ಕಾಣುತ್ತಿದ್ದರು.

ಅಯ್ಯನಿಗೆ ವಿದ್ಯಾವಂತರನ್ನು ಕಂಡರೆ ಅಪಾರ ಗೌರವ, ಪ್ರೀತಿ. ನನಗೆ ಬರೆಯುತ್ತಿದ್ದ ಪತ್ರ' ಗಳಲ್ಲಿ ಮಕ್ಕಳನ್ನು ಚೆನ್ನಾಗಿ ಓದಿ ವಿದ್ಯಾವಂತರನ್ನಾಗಿ ಮಾಡು ಎಂಬ ವಾಕ್ಯ ಬರೆಯಲು ಎಂದೂ ಮರೆಯುತ್ತಿರಲಿಲ್ಲ. ತಾವು ಹೆಚ್ಚಿಗೆ ಓದಿಲ್ಲದಿದ್ದರೂ ಗಂಡುಮಕ್ಕಳನ್ನು ಚೆನ್ನಾಗಿ ಓದಿಸಬೇಕೆಂದು ಮೈಸೂರಿನ ರಾಮಕೃಷ್ಣ ವಿದ್ಯಾಶಾಲೆಗೆ ಹಾಕಿದರು. ಹೆಣ್ಣುಮಕ್ಕಳ ವಿದ್ಯಾಭ್ಯಾಸ ಎಲ್ಲಿ ನಡೆದರೂ ಪರವಾಯಿಲ್ಲ ಎಂಬ ಅವರ ಔದಾಸೀನ್ಯಕ್ಕೆ ಅಮ್ಮ ಅಡ್ಡಬಂದರು. ಇದಕ್ಕೆ ನಮ್ಮ ಚಿಕ್ಕಮಾವ ನಾಗೇಶ್ ಬರೆದ ಪತ್ರವೂ ಒಂದು ಕಾರಣ. ಅದರ ಸಾರಾಂಶ, ಹೆಣ್ಣುಮಕ್ಕಳು ಉನ್ನತ ವಿದ್ಯಾಭ್ಯಾಸ ದಿಂದ ಗಾಂಧಿ, ಇಂದಿರಾ ಗಾಂಧಿಯ ತರಹ ಉನ್ನತ ಮಟ್ಟಕ್ಕೇರಬಹುದೆಂದು. ಹೀಗಾಗಿ ನನ್ನ ಮತ್ತು ತಂಗಿ ಪ್ರತಿಮಳ ವಿದ್ಯಾಭ್ಯಾಸ ಬೆಂಗಳೂರಿನಲ್ಲಿ ನಡೆಯಿತು. ನಾನು ಉನ್ನತ ಮಟ್ಟಕ್ಕೇರ ದಿದ್ದರೂ ಕಷ್ಟಪಡದೆ ಡಿಗ್ರಿ ಸಂಪಾದಿಸಿದೆ. ಅಯ್ಯನ ದುಡ್ಡು ಖರ್ಚು ಮಾಡಿದೆ. ನಮ್ಮ ಭಾವ ಗುಂಗ್ರುಳ್ಳ ಹೆಗ್ಡೆಯವರು ಯಾವಾಗಲೂ ನನ್ನ ಹಾಸ್ಟೆಲ್ ಬಿಲ್ಲಿನ ಬಗ್ಗೆ ತಮಾಷೆ ಮಾಡುತ್ತಿದ್ದರು. ನಮ್ಮ ಒಂದು ತಿಂಗಳ ಬಿಲ್ಲಿನಲ್ಲಿ ಅವರು ಕಾಲೇಜಿನ ವ್ಯಾಸಂಗ ಮುಗಿಸಿದ್ದರಂತೆ. ಒಂದಂತೂ ನಿಜ, ನಮಗೆ ಹೊರಗಿನ ಪ್ರಪಂಚದ ಪರಿಚಯವಾಗಿತ್ತು. ಇದಕ್ಕಾಗಿ ನನ್ನ ಅಮ್ಮ, ಮಾವನಿಗೆ ಪ್ರೀತಿಯ ನಮನ.

ನಾನು ಪಿ.ಯು.ಸಿ. ಓದುತ್ತಿದ್ದಾಗ ವಿಜ್ಞಾನದಲ್ಲಿ ಫೇಲಾದೆ. ಒಂದೆರಡು ದಿನ ಪ್ರಪಂಚವೇ ಮುಳುಗಿದಂತೆ ರೋದಿಸಿದೆ. ಅಯ್ಯ ಹೆಚ್ಚಿಗೆ ಬೈಯದಿದ್ದರೂ ಮನಸ್ಸಿನಲ್ಲಿ ನೊಂದುಕೊಂಡಿದ್ದರು. ಫಲಿತಾಂಶ ಬಂದ ಮಾರನೆ ದಿನ ಕಾರ್ಯನಿಮಿತ್ತ ಶಿವಮೊಗ್ಗಕ್ಕೆ ಹೋದಾಗ ನನ್ನ ಸ್ನೇಹಿತೆಯ

ತಂದೆಯನ್ನು ಭೇಟಿ ಮಾಡಿ ಬೇಜಾರಿನಿಂದ ನನ್ನ ಫಲಿತಾಂಶದ ಬಗ್ಗೆ ಹೇಳಿದಾಗ ಅವರಿಂದ ಬಂದ ಪ್ರತಿಕ್ರಿಯೆ : 'ಅಯ್ಯೋ, ನೀವೇ Lucky ಗುರಪ್ಪಗೌಡರೆ, ನೀವೇ Lucky. ನನ್ನ ಮಗಳು ಮೂರರಲ್ಲಿ ಫೇಲಾಗಿದ್ದಾಳೆ.' ಇದರಿಂದ ಅಯ್ಯನಿಗೆ ಸ್ವಲ್ಪ ಸಮಾಧಾನವಾಗಿರಬಹುದು ಕುರುಡುಗಣ್ಣಿಗಿಂತ ಮೆಳ್ಳೆಗಣ್ಣು ಉತ್ತಮವೆಂದು. ಇಂದಿಗೂ ನನ್ನ ಅಕ್ಕನ ಮಗಳು ನಿವೇದಿತಾ 'Lucky ರೇಖಮ್ಮ' ಎಂದು ಚುಡಾಯಿಸುತ್ತಿರುತ್ತಾಳೆ. ಈ ರೀತಿ ನನ್ನ ಉನ್ನತ ವಿದ್ಯಾಭ್ಯಾಸ ಸಾಗಿತ್ತು. ಯಾವುದೇ ಮಕ್ಕಳು ಹೆಚ್ಚಿನ ಅಂಕ ತೆಗೆದಾಗ, ಅಯ್ಯನ ಬಾಯಿಂದ Good Boy, Good Boy ಎಂಬ ಪ್ರಶಂಸೆ ಬರುತ್ತಿತ್ತು. ಅದು ಹುಡುಗ ಅಥವಾ ಹುಡುಗಿಯಾಗಿರಬಹುದಿತ್ತು.

ಅಯ್ಯನಿಗೆ ಹೊರಪ್ರಪಂಚದ ವಿದ್ಯಮಾನಗಳನ್ನರಿಯಲು ತೀವ್ರ ಆಸಕ್ತಿ, ವಿದೇಶದಿಂದ ಬಂದ ನೆಂಟರೊಂದಿಗೆ ಅಲ್ಲಿನ ವಿಷಯ ಸಂಗ್ರಹ ಮಾಡುತ್ತಿದ್ದರು. ಮೈಸೂರಿನ ನಮ್ಮ ಮನೆಗೆ ಬಂದಾಗ ನಾನು ಕೊಡುತ್ತಿದ್ದ ಕಾದಂಬರಿಗಳನ್ನೋದುತ್ತಿದ್ದರು.

ನಮ್ಮ ತಾಯಿಗೆ ಓದಿನಲ್ಲಿ ಆಸಕ್ತಿ ಕಡಿಮೆ. ದಿನಪತ್ರಿಕೆಯಲ್ಲಿ ಬರುತ್ತಿದ್ದ ಅಪಘಾತ, ಕೊಲೆ ಮುಂತಾದ ರೋಚಕ ವಿಷಯಗಳಿಗೆ ಸೀಮಿತವಾಗಿರುತ್ತಿತ್ತು ಅವರ ಓದು. ಸಮಯ ಕಳೆಯಲು ಪುಸ್ತಕ ಕೊಟ್ಟರೆ ಒಂದೆರಡು ಪುಟ ತಿರುಗಿಸಿ ಹಾಗೆಯೇ ಮುಚ್ಚುತ್ತಿದ್ದರು. ಅಮ್ಮನ ಅಕ್ಕ ಸರಸ್ವತಮ್ಮನಿಗೆ ಕಲೆ, ಹೊಲಿಗೆ, ಮಣಿ ಕೆಲಸದಲ್ಲಿ ಬಹಳ ಆಸಕ್ತಿ. ಅವರ ತಾಯಿಯ ಹಾಗೆ ಎಲ್ಲ ಕೆಲಸಕಾರ್ಯಗಳಲ್ಲಿ ಅಚ್ಚುಕಟ್ಟು. ಮನೆಯಲ್ಲಿ ಯಾರಿಗಾದರೂ ಹುಷಾರು ತಪ್ಪಿದರೆ ರೋಗಿಯನ್ನು ಸರಸ್ವತಿ ದೊಡ್ಡಮ್ಮ ನೋಡಿಕೊಳ್ಳುವ ರೀತಿ ಈಗಿನ ಕಾಲದ ನರ್ಸ್‌ಗಳೂ ನಾಚುವಂತಿರುತ್ತಿತ್ತು. ಆಗಿನ ಕಾಲದಲ್ಲಿ ಎನಿಮಾ ಕೊಡುವುದು, ರೋಗಿಗಳನ್ನು ಉಪಚರಿಸುವುದು ಮುಂತಾದ ಕೆಲಸಗಳನ್ನು ಬೇಸರವಿಲ್ಲದೆ ಮಾಡುತ್ತಿದ್ದರು. ನಮ್ಮೆಲ್ಲರನ್ನು ಮತ್ತು ನಮ್ಮ ಮಕ್ಕಳನ್ನು ಅವರ ಸ್ವಂತ ಮಕ್ಕಳಂತೆ ನೋಡಿಕೊಂಡರು. ಇದಕ್ಕಾಗಿ ನಾವೆಷ್ಟು ಋಣಿಯಾದರೂ ಸಾಲದು. ಅವರು ರಾತ್ರಿ ಕೆಲಸ ಮುಗಿಸಿ ನಮ್ಮಜ್ಜಿಗೆ ೩-೪ ಪುಟಗಳಷ್ಟು ಕಾದಂಬರಿ ಓದಿ ಹೇಳುತ್ತಿದ್ದರು. ಅದು ಈಗಿನ ಟಿ.ವಿ. ಸೀರಿಯಲ್ ರೀತಿ. ಸದ್ಯ ಮಧ್ಯೆ ಜಾಹೀರಾತಿನ ಉಪಟಳವಿರಲಿಲ್ಲ.

ಅಯ್ಯನಿಗೆ ಕೋಪ ಕಡಿಮೆ. ಸಿಟ್ಟು ಬಂದಾಗ ಸ್ವಲ್ಪ ಹೊತ್ತು ಕೂಗಾಡಿ ಸುಮ್ಮನಾಗುತ್ತಿದ್ದರು. ಮಕ್ಕಳ ಮೇಲೆ ತುಂಬಾ ಸಿಟ್ಟು ಬಂದಾಗ ದಿನಪತ್ರಿಕೆಯನ್ನು ಸುತ್ತಿ ಒಂದೇಟು ಹಾಕಿದರೆ ಹೆಚ್ಚು, ಅಷ್ಟಕ್ಕೆ ನಮಗೆಲ್ಲಾ ಅವಮಾನವೆನಿಸುತ್ತಿತ್ತು. ಒಂದು ಸಲ ಮಳೆಗಾಲದಲ್ಲಿ ನಾವೆಲ್ಲಾ ಗದ್ದೆಗೆ ಹೋದಾಗ ಆಟಕ್ಕೆ ಏಡಿಗಳನ್ನು ಹಿಡಿದು ಹಾಕಲು ಏನೂ ಸಾಧನ ಸಿಗದೆ ಚಿಕ್ಕ ಅಕ್ಕ ವಾಸಂತಿಯ ಸಲಹೆಯಂತೆ (ಅವರ) ಲಂಗದಲ್ಲಿ ಗಂಟು ಕಟ್ಟಿ ಮನೆಗೆ ಬಂದು ಬಿಚ್ಚಿದಾಗ ಲಂಗವೆಲ್ಲಾ ತೂತಾಗಿತ್ತು. ಆಗ ಏನೂ ಮುಚ್ಚಿಡುವ ಹಾಗಿರಲಿಲ್ಲ. ಅಮ್ಮನ ಆಕಾಶವಾಣಿಯ ಮೂಲಕ ಅಯ್ಯನಿಗೆ ಗೊತ್ತಾಗಿ ಅವರು ಕೊಡೆಯಿಂದ ಅಕ್ಕನಿಗೆ ಒಂದೇಟು ಕೊಟ್ಟಿದ್ದರು. ಅದೇ ಮೊದಲು ಮತ್ತು ಕೊನೆ. ಮುಂದೆಂದೂ ಹೊಡೆದ ಜ್ಞಾಪಕವಿಲ್ಲ. ನನಗಂತೂ ತುಂಬಾ ದುಃಖವಾಗಿತ್ತು. ಯಾಕೆಂದರೆ ನನ್ನ ಪಾಲಿಗೆ ಬರಬೇಕಿದ್ದ ಲಂಗ ತೂತಾಗಿತ್ತು.

ಅಮ್ಮನಿಗೆ ಮುಂಗೋಪವಿತ್ತು. ಆದರೆ ಅಲ್ಲಿ ಹಠ, ದ್ವೇಷವಿರಲಿಲ್ಲ. ನನಗೂ ಅವರಿಗೂ ಜಗಳವಾಗುತ್ತಿದ್ದ ವಿಷಯವೆಂದರೆ ಆಳುಗಳಿಗೆ ಬೈದಾಗ. ಕೆಲಸದವರು ಅವರು ಹೇಳಿದ ಕೆಲಸ ಕೂಡಲೆ ಮಾಡದಿದ್ದರೆ ಬೈಗುಳದ ಸುರಿಮಳೆ. ಹಾಗೆಂದು ಕೆಲಸದವರು ಅದನ್ನು ಮನಸ್ಸಿಗೆ ಹಾಕಿಕೊಳ್ಳುತ್ತಿರಲಿಲ್ಲ. ಕಾರಣ ಅವರಿಂದ ಪಡೆಯುತ್ತಿದ್ದ ಊಟ, ಉಪಚಾರ, ಕಾಣಿಕೆ. ಈಗ ನನಗೆ ಜವಾಬ್ದಾರಿ ಬಂದ ಮೇಲೆ ಕೆಲಸದವರ ಹತ್ತಿರ ಕೆಲಸ ಮಾಡಿಸುವುದು ಕಷ್ಟದ ಕೆಲಸವೆಂದು ಅರಿವಾಗಿದೆ. ಅಮ್ಮನ ಇನ್ನೊಂದು ಗುಣವನ್ನು ನಾನು ಬಹುವಾಗಿ ಮೆಚ್ಚಿಕೊಂಡಿದ್ದೆ.

ಅವರು ಬೇರೆಯವರ ಬಗ್ಗೆ ಅನಾವಶ್ಯಕ ಕುತೂಹಲ ಮತ್ತು ಕೆಟ್ಟದಾಗಿ ಮಾತನಾಡದಿರುವುದು. ಇದು ಮಕ್ಕಳು ಚೆನ್ನಾಗಿ ಬೆಳೆಯಲು ಸಹಕಾರಿಯಾಯಿತು ಎಂದು ತಿಳಿದಿದ್ದೇನೆ.

ಅಯ್ಯನಿಗೆ ಕುಡಿತ. ಸಿಗರೇಟು. ಇಸ್ಪೀಟಿನ ಯಾವ ಚಟವೂ ಇರಲಿಲ್ಲ. ಒಂದು ಸಲ ನಾವೆಲ್ಲಾ ಸೇರಿ ಅಯ್ಯನ ಕೋಣೆಯಲ್ಲಿ ಯಾರಿಗೂ ಕಾಣದ ಹಾಗೆ cards ಆಡುತ್ತಿದ್ದೆವು. ಊಟಕ್ಕೆ ಕರೆ ಬಂದಾಗ cards ನ್ನು ಬೆಡ್‌ಶೀಟಿನ ಕೆಳಗೆ ಅವಿತಿಟ್ಟು. ಊಟದ ನಂತರ ಇಸ್ಪೀಟನ್ನು ತರಲು ತಮ್ಮನನ್ನು ಕಳುಹಿಸಿದಾಗ ಬಂದಿದ್ದು ಅರ್ಧ ಆದ ಎಲೆಗಳು. ಇದು ಅಯ್ಯನ ಕೆಲಸವೆಂದು ಗೊತ್ತಾದರೂ ಏನೂ ಮಾಡುವ ಹಾಗಿರಲಿಲ್ಲ. ಈ ಮೌನ ಪ್ರತಿಭಟನೆಯಿಂದ ಅವರ ಮುಂದೆ cards ಆಡುವ ಧೈರ್ಯ ಬರಲಿಲ್ಲ.

ಅಮ್ಮ ಸ್ವಲ್ಪಮಟ್ಟಿಗೆ Gambler ಅನ್ನಬಹುದು. ಬೆಂಗಳೂರಿಗೆ ಹೋದಾಗ ಒಮ್ಮೊಮ್ಮೆ Race ಗೆ ಹೋಗುವವರೊಂದಿಗೆ ಸ್ವಲ್ಪ ದುಡ್ಡು ಕೊಟ್ಟು ಕಳಿಸಿದ್ದುಂಟು. ಆಗ ಹೆಂಗಸರು ಅದರಲ್ಲೂ ಮಲೆನಾಡಿನ ಹೆಂಗಸರು Race ಗೆ ಹೋಗುತ್ತಿದ್ದುದು ಬಹಳ ಕಡಿಮೆ. ಅವಕಾಶ ಸಿಕ್ಕಿದರೆ ಅಮ್ಮ ಖಂಡಿತ ಹೋಗುತ್ತಿದ್ದರು. ನನಗೂ ಅಮ್ಮನ ಈ ಚಟ ಬಂದಿದೆ. ಆದರೆ ಸಮಾಜಕ್ಕೆ ಹೆದರಿ Race ನಿಂದ ದೂರವಿದ್ದೇನೆ. ಈ ಚಟಗಳಿಗೆ ನನ್ನ ಯಜಮಾನರು ಕಟ್ಟಾ ವಿರೋಧಿ. ಆದರೆ ಅವರು ಮಾಡುತ್ತಿರುವ ಮತ್ತು ಮುಂದೆ ಮಾಡಬೇಕೆನ್ನುವ ಯೋಜನೆಗಳನ್ನು ನೆನೆಸಿಕೊಂಡರೆ ಇವರಿಗಿಂತ ದೊಡ್ಡ Gambler ಯಾರೂ ಇಲ್ಲ.

ಅಯ್ಯ ಹಾಸಿಗೆ ಇದ್ದಷ್ಟು ಕಾಲು ಚಾಚುತ್ತಿದ್ದರು. ಆದರೆ ಅಮ್ಮನಿಗೆ ಕಾಲಕ್ಕೆ ತಕ್ಕಂತೆ ನಡೆಯುವ ಆಸೆ. ಹೊಸತನ್ನು ಕೊಳ್ಳುವ ಬಯಕೆ. ಹಾಗಾಗಿ ನಮ್ಮ ಮನೆಗೆ ಊಟದ ಮೇಜು. ರೆಫ್ರಿಜೆರೇಟರ್ ಮುಂತಾದ ನಾಗರಿಕ ವಸ್ತುಗಳು ಬಂದವು. ಅಮ್ಮ ದೊಡ್ಡಮ್ಮ ಪ್ರತಿ ರಜೆಯಲ್ಲಿಯೂ ಬೆಂಗಳೂರಿನಲ್ಲಿರುವ ನಮ್ಮ ದೊಡ್ಡಕ್ಕನ ಮನೆಗೆ ಹೋಗುತ್ತಿದ್ದರು. ಅಲ್ಲಿರುವಷ್ಟು ದಿನವೂ ಶಾಪಿಂಗ್ ಮಾಡುವ ಕೆಲಸ. ವಿಜಯಕ್ಕನ ಸಹಕಾರ ಮತ್ತು ಭಾವ ಹಾಲಪ್ಪ ನವರ ಉಪಚಾರ. ಹಾಗಾಗಿ ಅಮ್ಮನ ಬೀರುವಿನಲ್ಲಿ ಸುಂದರವಾದ ವಸ್ತುಗಳು ತುಂಬಿರುತ್ತಿದ್ದವು. ಅಲ್ಲಿ ಗೊಂಬೆಗಳು, ಸೆಂಟು, ಹೊಸ ಚಪ್ಪಲಿಗಳು, ಪೌಡರ್ ಇತ್ಯಾದಿಗಳಿಂದ ತುಂಬಿರುತ್ತಿದ್ದ ಬೀರುವನ್ನು ಸ್ವಚ್ಛಗೊಳಿಸುವ ನೆಪದಲ್ಲಿ ಅದನ್ನೆಲ್ಲಾ ನೋಡಿ ಆನಂದಿಸುತ್ತಿದ್ದೆವು. ಒಮ್ಮೆ ನನ್ನ ತಮ್ಮ ಪ್ರಕಾಶ್ ವಿದೇಶದಿಂದ ಬರುವಾಗ ಅಮ್ಮನಿಗೆ ಮನೆಯಲ್ಲಿ ಹಾಕುವ Fur shoe ತಂದುಕೊಟ್ಟ. ಅದನ್ನು ನೋಡಿ ಆನಂದಿಸಿ ಹಾಗೆಯೇ ಬೀರುವಿಗೆ ಸೇರಿಸಿದರು. ಇದಾದ ಸ್ವಲ್ಪ ಸಮಯದಲ್ಲಿ ನನ್ನ ಚಿಕ್ಕ ಅಕ್ಕ ಇಂಗ್ಲೆಂಡಿನಿಂದ ಬರುವಾಗ ನನ್ನ ನಾದಿನಿ ಕೀರ್ತಿಗೆ ಅದೇ ಮಾದರಿಯ shoe ತಂದಿದ್ದರು. ಅವರ ಅಜಾಗರೂಕತೆಯ ಫಲವಾಗಿ ಒಂದೇ ಕಾಲಿನ ಎರಡು shoe ಗಳನ್ನು ತಂದಿದ್ದರು. ಇಂಡಿಯಾಕ್ಕೆ ಬಂದ ಮೇಲೆ ತಮ್ಮ ತಪ್ಪಿನ ಅರಿವಾಗಿತ್ತು. ಅಮ್ಮನಿಗೆ ಏನೂ ಗೊತ್ತಾಗುವುದಿಲ್ಲವೆಂದು ತಿಳಿದು ತಾವು ತಂದ shoe ಗಳನ್ನು ಅಮ್ಮನಿಗೆ ಕೊಟ್ಟು ಅವರ ಬೀರುವಿನಲ್ಲಿದ್ದ ಸರಿಯಾದ ಅಳತೆಯಿರುವ ಹಳೇ shoe ಗಳನ್ನು ಕೀರ್ತಿಗೆ ಕೊಡಿಸಿದರು. ಅಮ್ಮ ಮಾರನೇ ದಿನ ತಮ್ಮ shoe ವನ್ನು ಪರಿಶೀಲಿಸಿದಾಗ ಅವರಿಂದ ಉದ್ಗಾರ. "ಅಯ್ಯೋ ಪಾಪ. ವಾಸಂತಿಗೆ ಅಂಗಡಿಯವನು ಮೋಸ ಮಾಡಿದ್ದಾನೆ" ಎಂದು ಹೇಳಿ ತಮ್ಮ shoe ಗಳನ್ನು ವಾಪಸ್ ಪಡೆದರು. ಹೀಗಾಗಿ ಅಕ್ಕ ಎರಡನೆಯ ಬಾರಿ ಬೇಸ್ತು ಹೋಗಿದ್ದರು.

ಅಮ್ಮ ಆಚರಿಸುತ್ತಿದ್ದ 'ಶಾಸ್ತ್ರೀ ಸೋಮವಾರ' ಬಹಳ ಮಜವಾಗಿರುತ್ತಿತ್ತು. ಹಿಂದೆ ಲಾಲ್‌ಬಹಾದ್ದೂರ್ ಶಾಸ್ತ್ರಿಯವರು ಪ್ರಧಾನಮಂತ್ರಿಯಾಗಿದ್ದಾಗ ಜನಗಳು ರಾತ್ರಿ ಒಂದು ಊಟ ಬಿಟ್ಟರೆ ಅಕ್ಕಿ. ಗೋಧಿಯ ಉಳಿತಾಯವಾಗುತ್ತದೆಂದು ತಿಳಿದು ಆ ರೀತಿ ಮಾಡಲು

ವಿನಂತಿಸಿಕೊಂಡಿದ್ದರು. ಆದರೆ ನಮ್ಮ ಮನೆಯಲ್ಲಿ ಅಮ್ಮ ಅಡುಗೆಯವರಿಗೆ ಬೆಳಿಗ್ಗೆಯಿಂದಲೇ ರಾತ್ರಿ ಉಪವಾಸದ ಬಗ್ಗೆ ದೊಡ್ಡ ಭಾಷಣ ಮಾಡುತ್ತಿದ್ದರು. ಅದರ ಫಲವಾಗಿ ಅನ್ನದ ಬದಲಿಗೆ ಚಪಾತಿ, ಮೊಟ್ಟೆ, ಹಣ್ಣಿನ ರಸಾಯನದ ಸಂತರ್ಪಣೆಯಲ್ಲಿ ಮುಗಿಯುತ್ತಿತ್ತು ನಮ್ಮ ಉಪವಾಸ.

ಅಮ್ಮನ ಸ್ನಾನವು ನಮಗೆಲ್ಲಾ ಮನರಂಜನೆಯ ವಸ್ತುವಾಗಿತ್ತು. ಅದು ಕುವೆಂಪು ಅವರ ಅಜ್ಜಯ್ಯನ ಅಭ್ಯಂಜನ ನೆನಪಿಗೆ ತರುತ್ತಿತ್ತು. ಅವರ ತಲೆ ಸ್ನಾನದ ದಿನ ಸಾವುಗಳು ಅಲ್ಲಿಲ್ಲಿ ಸುಳಿದಾಡುವಂತಿರಲಿಲ್ಲ. ಹಂಡೆಯಲ್ಲಿ ಕುದಿಕುದಿ ನೀರು. ಮೊದಲ ಸ್ನಾನ ಅವರ ಬೀಗದ ಕೈಗೊಂಚಲಿಗೆ, ನಂತರ ಅವರ ಚೌಲಿಗೆ. ಆಮೇಲೆ ಸೀಗೆಪುಡಿ. ಸೋಪಿನ ಸ್ನಾನವಾಗುತ್ತಿತ್ತು. ಹೀಗೆ ನಿರಂತರ ಸ್ನಾನಕ್ಕೆ ಒಂದೆರಡು ಗಂಟೆ ತೆಗೆದುಕೊಳ್ಳುತ್ತಿದ್ದರು. ದೇವರ ದಯೆಯಿಂದ ಇಲ್ಲಿ ಯಾರೂ ಮೂರ್ಛೆ ಹೋಗುತ್ತಿರಲಿಲ್ಲ. ಬದಲಿಗೆ ನೀರು ಹಾಕಿ ಹಾಕಿ ನಮ್ಮ ಗಿರಿಜಳಿಗೆ ಸುಸ್ತಾಗಿರುತ್ತಿತ್ತು.

ಅಮ್ಮನ ಸ್ನಾನದ ರೀತಿಯೇ ಇರುತ್ತಿತ್ತು ಅವರು ಪ್ರತಿ ಸಂಜೆ ತಲೆನೋವಿನ ನೆಪದಲ್ಲಿ ಹಚ್ಚುತ್ತಿದ್ದ ಅಮೃತಾಂಜನ ಪ್ರಕರಣ. ಇದರ ತಯಾರಕರಿಗೆ ಅಮ್ಮನಂತಹ ಗಿರಾಕಿಗಳಿದ್ದರೆ ಟಿ.ವಿ.ಯಲ್ಲಿ ಜಾಹೀರಾತು ಕೊಡುವ ಪ್ರಸಂಗವೇ ಬರುವುದಿಲ್ಲ. ಅಮ್ಮ ಹೋದಮೇಲೆ ಆ ಸಂಪ್ರದಾಯವನ್ನು ನನ್ನ ತಂಗಿ ಪ್ರತಿಮಾ ಮುಂದುವರಿಸಿಕೊಂಡು ಕಂಪನಿ ಮುಚ್ಚಿಹೋಗದಂತೆ ನೋಡಿಕೊಂಡಳು.

ಅಯ್ಯ ಹಿರಿಯ ಕಿರಿಯರೆನ್ನದೆ ಎಲ್ಲರೊಂದಿಗೂ ಹೊಂದಿಕೊಳ್ಳುವ ಸ್ವಭಾವದಿಂದ ಎಲ್ಲರಿಗೂ ಅಚ್ಚುಮೆಚ್ಚಾಗಿದ್ದರು. ನನ್ನ ತಮ್ಮ ವಿದೇಶಿ ಹುಡುಗಿಯನ್ನು ಮದುವೆಯಾದಾಗ ಒಂದೆರಡು ದಿನ ದುಃಖಿಸಿದರು. ಕೂಡಲೇ ಸಮಾಧಾನ ಹೊಂದಿ ನಮಗೆ ತಮ್ಮನಿಗೆ ಪತ್ರ ಬರೆಯುವಂತೆ ಆದೇಶಿಸಿದ್ದರು. ತಮ್ಮ ಮತ್ತು ಅವನ ಹೆಂಡತಿ, ಮಗುವಿನೊಂದಿಗೆ ಇಂಡಿಯಾಕ್ಕೆ ಬಂದಾಗ ಎಲ್ಲರಕ್ಕಿಂತಲೂ ಸಂತೋಷಪಟ್ಟಿದ್ದು ಅವರೇ. ಮಗು ಅಯ್ಯನಿಗೆ ತುಂಬಾ ಹೊಂದಿಕೊಂಡಿತ್ತು.

ಅಮ್ಮ ನಮ್ಮ ಮನೆಗೆ ನೆಂಟರು ಬರುತ್ತಾರೆಂದರೆ ನಮಗೆಲ್ಲಾ ನಡುಕ ಬರಿಸುವಷ್ಟು ಅಡುಗೆ ತಯಾರಿ ನಡೆಸುತ್ತಿದ್ದರು. ವಾರಗಳ ಮುಂಚೆ ಅಯ್ಯನಿಗೆ ಅಡುಗೆ ಲಿಸ್ಟ್ ಹೋಗುತ್ತಿತ್ತು. ಅದು ಅಡುಗೆಮನೆಯವರು ಮದುವೆ ಸಮಾರಂಭಗಳಿಗೆ ಕೊಡುವ ಲಿಸ್ಟ್‌ಗಿಂತ ಉದ್ದವಾಗಿರುತ್ತಿತ್ತು. ಉದಾ : ೨೫ ಕಟ್ಟು ಕೊತ್ತುಂಬರಿ ಸೊಪ್ಪು, ೫೦ ಲಿಂಬೆಹಣ್ಣು, ರವೆ, ಹಣ್ಣು, ತರಕಾರಿ, ಮಾಂಸ, ತುಪ್ಪ ಇತ್ಯಾದಿ. ಎಲ್ಲದಕ್ಕೂ ಒಳ್ಳೆಯ ಎಂಬ ಪದವನ್ನು ಸೇರಿಸಲು ಮರೆಯುತ್ತಿರಲಿಲ್ಲ. ಮಾಂಸ ನಮ್ಮ ಊರಿನಲ್ಲಿ ಸಿಗುತ್ತಿದ್ದರೂ ಅದನ್ನು ಕಣ್ಣೆತ್ತಿಯೂ ನೋಡದೆ ಎಲ್ಲವನ್ನೂ ಶಿವಮೊಗ್ಗದಿಂದಲೇ ತರಿಸುತ್ತಿದ್ದರು. ಅಯ್ಯ ನಮ್ಮಕ್ಕನ ಸಹಕಾರದಿಂದ ಎಲ್ಲಾ ಸಾಮಾನುಗಳನ್ನು ಮರೆಯದೇ ತರುತ್ತಿದ್ದರು. ಅದರಲ್ಲಿ ಕೊಂಚ ವ್ಯತ್ಯಾಸವಾದರೂ ಅಯ್ಯನ ಗತಿ ಮುಗಿದ ಹಾಗೇ. ಅಮ್ಮನ ಕೋಳಿ ಪಲಾವ್ ತಿಂದು ನೆಂಟರು ಹೊಗಳಿದಾಗ ಅವರಿಗೆ ಖುಷಿಯೋ ಖುಷಿ. ಅಮ್ಮನ ಅಡುಗೆ ಯಾರೂ ಹೊಗಳುವಂತಹದು. ಅವರು ಕಣ್ಣಳತೆಯಲ್ಲಿ ಹಾಕಿ ಮಾಡಿದ ಅಡುಗೆಯನ್ನು ಅನುಸರಿಸಿ ನಾನು ಮಾಡಿದಾಗ ಅದು ಕೆಟ್ಟ ಅಡುಗೆಯಾಗಿರುತ್ತಿತ್ತು.

ಅನಿರೀಕ್ಷಿತವಾಗಿ ಅತಿಥಿಗಳು ಆಗಮಿಸಿದಾಗ ನಮ್ಮ ಮನೆಯಲ್ಲಿ ಕೋಳಿ ಹಿಡಿಯುವ ಕೆಲಸ ಅಡುಗೆ ಹೂವಪ್ಪನ ಮೇಲಿರುತ್ತಿತ್ತು. ಅದರಲ್ಲೂ ಅಮ್ಮ ಹೇಳಿದ ಕೋಳಿಯನ್ನೇ ಹಿಡಿಯಬೇಕಿತ್ತು. ಆ ಕೋಳಿ ಪ್ರಾಣಭಯದಿಂದ ಓಡಿ ಹೋಗುತ್ತಿತ್ತು. ಹಳ್ಳಿಯ ನಿಶ್ಶಬ್ದ ವಾತಾವರಣದಲ್ಲಿ ಅಮ್ಮನ ಕೂಗನ್ನು, ಹೂವಪ್ಪನು ಕೋಳಿ ಹಿಡಿಯುವಾಗ ಆಗುತ್ತಿದ್ದ ಗಲಾಟೆಯನ್ನು ಈಗ ನೆನೆಸಿಕೊಂಡು ನಗು ಬಂದರೂ ಆಗ ನೆಂಟರಿಗೆಲ್ಲಾ ಗಲಾಟೆ ಗೊತ್ತಾಗುತ್ತದೆಂಬ ಭಯಕ್ಕೆ ನಮ್ಮಗಳ ಪ್ರತಿರೋಧವಿದ್ದರೂ ಅಮ್ಮನ ಕೂಗು ನಿಲ್ಲುತ್ತಿರಲಿಲ್ಲ.

ಬಂದ ಅತಿಥಿಗಳಿಗೆ ಅಡುಗೆಯ ಮುನ್ನವೇ ಊಟದ ಮೆನು ಗೊತ್ತಿರುತ್ತಿತ್ತು. ಈಗ ನಮ್ಮ ಮನೆಗೆ ಅನಿರೀಕ್ಷಿತವಾಗಿ ಯಾರಾದರೂ ಬಂದರೆ ಹೋಟೆಲ್‌ಗೆ ಆರ್ಡರ್ ಮಾಡಿ ತರಿಸಿದ ಅಡುಗೆ ಆಗಿನ ಕೋಳಿ ಸಾರಿಗೆ ಸಾಟಿಯಿಲ್ಲ. ಈಗ ನೆಂಟರು ಬಂದರೆ ನಮ್ಮಗಳ ಉಪಚಾರದಲ್ಲಿ ಒಂದು ರೀತಿಯ ಯಾಂತ್ರಿಕತೆ. ಡಂಭಾಚಾರವಿದೆ. ಮನೆಯ ಅಲಂಕಾರ. ವಿವಿಧ ರೀತಿಯ ಅಡುಗೆ ಮಾಡಿ ನೆಂಟರನ್ನು ಉಪಚರಿಸುವುದಕ್ಕಿಂತ ಹೆಚ್ಚಾಗಿ ನಮ್ಮ ಶ್ರೀಮಂತಿಕೆಯ ಪ್ರದರ್ಶನವೇ ಜಾಸ್ತಿಯಾಗಿರುತ್ತದೆ.

ಇತ್ತ ಅಯ್ಯನ ಉಪಚಾರದ ರೀತಿಯೇ ಬೇರೆ ರೀತಿ. ಟವೆಲ್ ಹಿಡಿದು ನೆಂಟರನ್ನು ಸ್ನಾನಕ್ಕೆ ಕರೆದೊಯ್ಯುವುದು. ಪ್ರೀತಿಯಿಂದ ಮಾತನಾಡಿಸಿ ಅವರ ಮಾತುಗಳನ್ನು ಆಲಿಸುವುದು ಹೀಗೇ ಸಾಗಿರುತ್ತಿತ್ತು ಅವರ ಉಪಚಾರ.

ಅಮ್ಮನಿಗೆ ಸಣ್ಣ ಸಮಾರಂಭಕ್ಕೂ ಕೆಲಸದವರು ಅಗತ್ಯಕ್ಕಿಂತ ಹೆಚ್ಚಾಗಿ ಇರಬೇಕಿತ್ತು. ಮನೆ ಆಳುಗಳಲ್ಲದೆ, ಹೊರಗಿನ ಆಳುಗಳ ಸಹಾಯ ಪಡೆಯುತ್ತಿದ್ದರು. ಎಲ್ಲಾ ಕೆಲಸವೂ ಶ್ರದ್ಧೆಯಿಂದ ನಡೆಯಬೇಕಿತ್ತು. ನಾನು ಎಷ್ಟೋ ಬಾರಿ ನಮ್ಮ ಮನೆಗೆ ಸ್ವಲ್ಪ ದೂರದಲ್ಲಿದ್ದ ನಮ್ಮ ಚಿಕ್ಕಮ್ಮ, ಅತ್ತಿಗೆಯವರ ಕಾರ್ಯದಕ್ಷತೆಯ ಬಗ್ಗೆ ಹೇಳಿದರೂ ಅವರು ಕಿವಿಗೊಡುತ್ತಿರಲಿಲ್ಲ.

ಅಯ್ಯ ಅನಾವಶ್ಯಕ ಖರ್ಚು ಮಾಡದಿದ್ದರೂ ವಿದ್ಯಾರ್ಥಿಗಳಿಗೆ ಹಣ ಸಹಾಯ ಮಾಡಿದ್ದುಂಟು. ಆಗ ಯಾರೂ ಪ್ರಚಾರಕ್ಕೋಸ್ಕರ ಸಹಾಯ ಮಾಡುತ್ತಿರಲಿಲ್ಲ. ಹಿಂದಿನವರ ಈ ಮನೋಭಾವದಿಂದ ಜನರ ಕಲ್ಯಾಣವಾಗುತ್ತಿತ್ತು. ಈ ವಿಷಯ ಬಂದಾಗ ನನ್ನ ನೆನಪಿಗೆ ಬರುವುದು ಅಮ್ಮನ ಸೋದರತ್ತೆ ಚೆನ್ನಮ್ಮ. ಅವರು ಚಿಕ್ಕಂದಿನಲ್ಲಿಯೇ ಗಂಡನನ್ನು ಕಳೆದುಕೊಂಡು ತೌರು ಸೇರಿದರು. ತಮಗೆ ಸೇರಿದ ಆಸ್ತಿಯಲ್ಲಿ ದೇವಂಗಿಯಲ್ಲಿ ಆಸ್ಪತ್ರೆ ಕಟ್ಟಿಸಿ ಊರಿಗೆ ಅನುಕೂಲವಾಗುವಂತೆ ಮಾಡಿದರು.

ಅಯ್ಯ ತೀರಿಹೋದ ಮೇಲೆ ಊರಿಗೆ ಹೋಗುವ ಮನಸ್ಸೇ ಆಗುತ್ತಿಲ್ಲ.

ಅಯ್ಯ ಅಮ್ಮನ ಸ್ವಭಾವ ಭಿನ್ನ ಭಿನ್ನವಾಗಿದ್ದರೂ ಹೊಂದಿಕೊಂಡು ಹೋಗುವ ಸ್ವಭಾವದಿಂದ ಜೀವನ ಏರುಪೇರಿಲ್ಲದೆ ಸಾಗಿತ್ತು. ಮಕ್ಕಳು ಸಮಾಜಕ್ಕೆ ಹೊರೆಯಾಗದಂತಹ ವಾತಾವರಣವಿತ್ತು. ಇದು ಬಹುಶಃ ಆಗಿನ ಕಾಲದ ಜೀವನಶೈಲಿ, ಶಾಂತ ವಾತಾವರಣ ಕಾರಣ ವಾಗಿರಬಹುದು. ಈಗಿನ ಧನದಾಹ, ಉಸಿರು ಕಟ್ಟುವಂತಹ ಜೀವನ, ಜನಸಂಖ್ಯಾ ಸ್ಫೋಟ. ನಿರುದ್ಯೋಗದ ಸಮಸ್ಯೆಯಿಂದ ಮನುಷ್ಯ ಮನುಷ್ಯನನ್ನು ನುಂಗುವಂತಹ ಕಾಲ ಬಂದಿದೆ. ಇದನ್ನು ನೆನೆಸಿಕೊಂಡರೆ ಮುಂದಿನ ಮಕ್ಕಳ ಭವಿಷ್ಯದ ಬಗ್ಗೆ ಭಯ ಬರುತ್ತದೆ. ಇದನ್ನೆಲ್ಲಾ ಯೋಚಿಸಿದರೆ ನಾವು ತುಂಬಾ ಅದೃಷ್ಟವಂತರೆನ್ನಬಹುದು. ಅಯ್ಯ ತುಂಬಾ ಓದಿಲ್ಲದಿದ್ದರೂ ಅವರ ನಡೆವಳಿಕೆ ಸುಸಂಸ್ಕೃತವಾಗಿತ್ತು. ಅವರು ಯಾರ ಬಗ್ಗೆಯೂ ಕೆಟ್ಟದಾಗಿ ಯೋಚಿಸುತ್ತಿರಲಿಲ್ಲ. ಈ ವಾತಾವರಣ ದಲ್ಲಿ ನಾವು ಬೆಳೆದಿದ್ದರಿಂದ ಯಾರಿಗಾದರೂ ಒಳ್ಳೆಯದನ್ನು ಮಾಡಲಿಕ್ಕಾಗದಿದ್ದರೂ ಕೆಟ್ಟದ್ದನ್ನಂತೂ ಹಾರೈಸುವುದಿಲ್ಲ. ನಮ್ಮಿಂದ ಈ ಸಮಾಜಕ್ಕೆ ಕಿಂಚಿತ್ ಸಹಾಯವಾಗಿದ್ದರೆ ಅದಕ್ಕೆ ಕಾರಣ ಅಯ್ಯ, ಅಮ್ಮ ಮತ್ತು ನಾವು ಬೆಳೆದ ಪರಿಸರ. ಅಂತಹ ಜೀವನ ದಕ್ಕಿಸಿದ ನಮ್ಮ ತಂದೆ ತಾಯಿಗೆ ನಾವು ಚಿರಋಣಿಗಳು. ನಮ್ಮ ಅಯ್ಯ ನಮ್ಮೊಬ್ಬರಿಗೇ ಅಯ್ಯನಾಗಿರಲಿಲ್ಲ. ನಮ್ಮ ಇಡೀ ಕುಟುಂಬಕ್ಕೆ, ಊರಿಗೇ ಅಯ್ಯನಾಗಿದ್ದರು.

● ● **ರೇಖಾ ವಿಷ್ಣುಮೂರ್ತಿ :**
ಆಡಳಿತಾಧಿಕಾರಿಣಿ, ಗೋಪಾಲಗೌಡ ಶಾಂತವೇರಿ ಆಸ್ಪತ್ರೆ, ನಜರಬಾದ್, ಮೈಸೂರು - ೫೭೦ ೦೧೦

## ನನ್ನ ಅವ್ವ ನನ್ನ ಅಪ್ಪ

ಎಂ. ಡಿ. ಗೋಗೇರಿ

ನನ್ನ ಅವ್ವ ನನ್ನ ಅಪ್ಪ ತೀರಿಕೊಂಡು ೩೨ ವರ್ಷಗಳಾದವು. ಅವರು ಒಂದೇ ವರ್ಷದಲ್ಲಿ ಎಂಟು ತಿಂಗಳ ಅಂತರದಲ್ಲಿ ಅಸ್ತಂಗತರಾದರು. ಮೊದಲು ತಾಯಿ, ನಂತರ ತಂದೆ. ನನ್ನ ತಾಯಿ ತೀರಿಕೊಂಡಾಗ ನಾನು ನಮ್ಮೂರು ಗೋಗೇರಿಯಲ್ಲಿ ಇರಲಿಲ್ಲ. ನಾನೇ ಚಿಕ್ಕವ ನಾದ್ದರಿಂದ ನನ್ನನ್ನು ನೋಡಲು ಸಾಯುವ ಮುಂದೆ ಬಹಳ ತವಕಪಟ್ಟಳಂತೆ. ಸತ್ತ ಸುದ್ದಿ ತಲುಪಿದ ಮೇಲೆ ನಾನು ಇಲಕಲ್ಲಿಂದ ಹೌಹಾರಿ ಕುಂಟೋಜಿ ಎಂಬ ಊರಿನ ವರೆಗೆ ಗಾಡಿಗೆ ಬಂದಿಳಿದು ಅಡ್ಡದಾರಿ ಹಿಡಿದು ಓಡೋಡುತ್ತ ನಮ್ಮೂರಿಗೆ ಬಂದು ಮುಟ್ಟಿದೆ. ಇನ್ನು ಅರ್ಧ ತಾಸಿನಲ್ಲಿ ಪಾರ್ಥಿವ ಶರೀರವನ್ನು ದಫನ ಮಾಡುವವರಿದ್ದರು. ಆದರೆ ನನ್ನ ಪುಣ್ಯ, ಹೆತ್ತ ಮಾತೆಯ ಅಂತಿಮ ದರ್ಶನವಾಯಿತು. ಆ ದುಃಖದಲ್ಲಿ ಆಕೆಯ ಪ್ರೀತಿ, ಕಕ್ಕುಲಾತಿಗಳು ನನ್ನ ಕಣ್ಮುಂದೆ ಕಟ್ಟಿ ನಿಂತವು. ಈಗಲೂ ನಿಂತಿವೆ. ಅದಕ್ಕೆಂದೇ ನಾನು ತಾಯಿಯ ವಾತ್ಸಲ್ಯ ಕುರಿತು ಹತ್ತಾರು ಪದ್ಯಗಳನ್ನು ರಚಿಸಿದ್ದೇನೆ.

ಅಮ್ಮ ನಿನ್ನ ಒಡಲಿನಲ್ಲಿ ಎನಿತು ಒಲವು ತುಂಬಿದೆ!
ನಿತ್ಯ ನಾನು ಸವಿದ್ದೇ ಸವಿದೆ ಆದರುಕ್ಕಿ ಬರುತಿದೆ
ತಮ್ಮ ತಂಗಿ ಅಣ್ಣ ಅಕ್ಕರೆಲ್ಲ ಮಿಂದು ನಲಿವರು
ಎಷ್ಟು ಸೆಲೆಗಳನ್ನು ನಿನ್ನ ಹೃದಯಲಿಟ್ಟ ದೇವರು!

ನನ್ನ ತಾಯಿ ತೀರಿಕೊಂಡ ಎಂಟು ತಿಂಗಳ ನಂತರ ನಮ್ಮ ಅಪ್ಪ ದಸ್ತಗೀರಸಾಹೇಬರು ನೆಲ ಹಿಡಿದರು. ಆಗ ಅವರಿಗೆ ಎಂಭತ್ತು ವರ್ಷಗಳಾಗಿರಬಹುದು. ತಾಯಿ ತೀರಿಕೊಂಡಾಗ ನಾನು ತಾಯಿಯ ಬಳಿ ಇರಲಿಲ್ಲ. ಅದನ್ನು ತಿಳಿದುಕೊಂಡು ಅಪ್ಪನ ಅಂತ್ಯಾವಸ್ಥೆಯಲ್ಲಿ ಬಳಿಯಲ್ಲಿಯೇ ಇರಬೇಕೆಂದು ರಜೆ ತೆಗೆದುಕೊಂಡು ಊರಲ್ಲಿಯೇ ಉಳಿದೆ. ವೈದ್ಯರಿಂದ ಔಷಧೋಪಚಾರ ನಡೆಸಿದ್ದೆವು. ಆದರೆ ಮುಖ ಕೈ ಕಾಲುಗಳಿಗೆ ಬಾವು ಬಂದು ಹೊಟ್ಟೆಯೂ ಬಾತುಕೊಂಡಿತು. ಕೊನೆಗೆ ಡಾಕ್ಟರರು ಪರೀಕ್ಷಿಸಿ, "ಬೇಡಿದ್ದು ಕೊಟ್ಟು ಬಿಡ್ರಿ" ಎಂದರು. ನನ್ನ ಎದೆ ಧಸಕ್ಕೆಂದಿತು. ನನಗೆ ಜನ್ಮ ನೀಡಿ ಕೆಟ್ಟ ಬಡತನದಲ್ಲಿಯೂ ಶಕ್ತಿ ಮೀರಿ ನನಗೆ ವಿದ್ಯೆ ಕೊಡಿಸಿ ಶಿಕ್ಷಕನನ್ನಾಗಿ ಮಾಡಿ, ತಾನು ಸುಖ ಪಡದಿದ್ದರೂ ನನ್ನ ಸುಖ ಬಯಸುತ್ತಿದ್ದ ತಂದೆ ಇನ್ನು ಒಂದೆರಡು ದಿನಗಳಲ್ಲಿ ಕಣ್ಮರೆಯಾಗುತ್ತಾನೆಂದು ಹೌಹಾರಿ ಬಿಟ್ಟೆ. ಡಾಕ್ಟರರು ಹಾಗೆ ಹೇಳದಿದ್ದರೆ ಭೀತಿಗೊಳ್ಳುತ್ತಿರಲಿಲ್ಲ. ಆದರೆ ಕಹಿಯಾದ ಸತ್ಯವನ್ನು ಹೇಳಿದ್ದರು. ಕಣ್ಣು ಮುಚ್ಚಿದಂತೆಯೇ ಇದ್ದವು. ಕ್ಷೀಣ ಉಸಿರಾಟ ನಡೆದಿತ್ತು. ಕೊನೆಗೆ ನಿಂತೇ ಹೋಯಿತು. ಕಣ್ಣ ಕುಣಿಕೆಯಿಂದ ಎರಡು ಹನಿ ನೀರು ಹೊರಗುರುಳಿದವು.

ಇದ್ದ ಮೂರು ಎಕರೆ ಜಮೀನಿನಲ್ಲಿ ವರ್ಷಕ್ಕಾಗುವಷ್ಟು ಕಾಳು ಕಡಿ ಬಳಿದು ಎರಡು ಎತ್ತು, ಒಂದು ಆಕಳು ಕಟ್ಟಿಕೊಂಡು ಒಕ್ಕಲುತನ ಮಾಡುತ್ತ ಮನೆತನದ ಪಿಂಜಾರ ಕಸಬು ಆದ ಎತ್ತಿಗೆ ಹಗ್ಗದ ಸಾಮಾನು ಮಾಡಿ, ಮಾರಿ, ಬಂದ ಹಣದಿಂದ ನಾಲ್ಕೂ

ಮಕ್ಕಳನ್ನು ಜೋಪಾನ ಮಾಡುತ್ತ ಯಾವುದೇ ಸಾಲ ಸೋಲದಲ್ಲಿ ಸಿಕ್ಕಿಹಾಕಿಕೊಳ್ಳದೇ ಯಾವುದೇ ಸೌಲಭ್ಯವಿಲ್ಲದ ಹಳ್ಳಿಯಲ್ಲಿ ವಾಸಿಸಿ ನನಗೆ ಎಲ್ಲೆಲ್ಲೋ ಇಟ್ಟು, ಮಾಸ್ತರನಾಗುವಷ್ಟು ಶಾಲೆ ಕಲಿಸಿದ್ದು ಒಂದು ಪವಾಡವೇ ಸರಿ. ನನಗೆ ಈಗಲೂ ಆಶ್ಚರ್ಯ, ಅಂಜಿಕೆಯಾಗುತ್ತಿದೆ. ನನ್ನ ಓರಿಗೆಯವರನ್ನು ನಾಲ್ಕನೇ ಇಯತ್ತೆ ಕಲಿತ ಕೂಡಲೇ ಶಾಲೆ ಬಿಡಿಸಿ ಕೈಕಸುಬಿಗೆ ಹಚ್ಚಿದಂತೆ ನನ್ನನ್ನೂ ಸಹ ನನ್ನ ಅಪ್ಪ ಅವ್ವ ಶಾಲೆ ಬಿಡಿಸಿದ್ದರೆ ಈ ಸ್ಥಿತಿಯಲ್ಲಿ ಇರುತ್ತಿದ್ದೆನೆ? ಕವಿಯಾಗುತ್ತಿದ್ದೆನೆ? ನನ್ನ ಮಕ್ಕಳು ಸುಶಿಕ್ಷಿತರಾಗುತ್ತಿದ್ದರೆ? ಹುಬ್ಬಳ್ಳಿ ಸೇರುತ್ತಿದ್ದೆನೆ?

ನಮ್ಮ ಊರು ಗೋಗೇರಿ. ಈಗಿನ ಗದಗ ಜಿಲ್ಲೆಯ ರೋಣ ತಾಲೂಕಿನ ಪೂರ್ವಕ್ಕೆ ಕುಷ್ಟಗಿಗೆ ಹೋಗುವ ಹೆದ್ದಾರಿಯ ಮೇಲೆ ಗಜೇಂದ್ರಗಡಾದಿಂದ ನಾಲ್ಕು ಮೈಲಿನ ಮೇಲಿದೆ. ಮುಸ್ಲೀಮ ಧರ್ಮದ ಪಿಂಜಾರ ಸಮುದಾಯಕ್ಕೆ ಸೇರಿದ ನಾಲ್ಕಾರು ಕುಟುಂಬಗಳಲ್ಲಿ ನಮ್ಮದೊಂದು ಕುಟುಂಬ. ನಮ್ಮ ತಾಯಿಯ ಹೆಸರು ಅಲ್ಲಮ್ಮ. ತಂದೆಯ ಹೆಸರು ದಸ್ತಸೀರಸಾಹೇಬ. ಅಡ್ಡ ಹೆಸರು ಪಿಂಜಾರ. ಊರಲ್ಲಿಯ ಜನರು ಪಿಂಜಾರ ದಸ್ತಪ್ಪ, ಪಿಂಜಾರ ಅಲ್ಲವ್ವ ಅಂತಾನೆ ಕರೆಯುತ್ತಿದ್ದರು. ನಾವು ದೊಡ್ಡ ಜಮೀನದಾರರಂತೂ ಅಲ್ಲವೇ ಅಲ್ಲ. ನಮ್ಮ ಪಾಲಿಗೆ ಮೂರು ಎಕರೆ ಜಮೀನು ಇತ್ತು. ಈಗಲೂ ಇದೆ. ಮನೆ ಮಾತ್ರ ಬಹಳ ಚಿಕ್ಕದು. ಎರಡೇ ಕೋಣೆಗಳು. ಒಂದು ಕೋಣೆಯಲ್ಲಿ ಅಡಿಗೆ ಮಾಡುತ್ತಿದ್ದೆವು. ಮತ್ತೊಂದು ಕೋಣೆಯಲ್ಲಿ ಆರು ಜನ ಮಲಗುತ್ತಿದ್ದೆವು.

ಮದುವೆಯಾದ ಮೇಲೆ ನಮ್ಮ ಅಣ್ಣ ಕೌದಿಯೊಂದಿಗೆ ನಮ್ಮ ಅತ್ತಿಗೆಯನ್ನು ಕರೆದುಕೊಂಡು ಮಾಳಿಗೆ ಏರುತ್ತಿದ್ದ. ಹಳ್ಳಿಗಳಲ್ಲಿ ಆಗ ಮನೆಗಳ ಮಾಳಿಗೆಗಳ ಬೆಡ್ ರೂಮುಗಳಾಗಿದ್ದವು. ಸಾಲಾಗಿ ಹೊಂದಿಕೊಂಡೇ ಇರುವ ಎಲ್ಲ ಮನೆಯ ಮಾಳಿಗೆಯ ಮೇಲೆ ಹೊಸ ದಂಪತಿಗಳು ಹವಾಸೀರ ಹನಿಮೂನ ಅನುಭವಿಸುತ್ತಿದ್ದರು. ಅಳಿಯ ಬಂದರೆ ಮನೆಯ ಒಳಗೆ ಸ್ಥಳಾವಕಾಶ ಕೊಟ್ಟು ಮುದುಕರು ಮಕ್ಕಳು ಮನೆ ಮಾಳಿಗೆ ಏರುತ್ತಿದ್ದರು. ಅಳಿಯ ಸೆಕೆಯಾಗುತ್ತದೆಂದು ಪಿಸುಗುಟ್ಟಿದರೆ ಮಾಳಿಗೆಯ ಛಾನ್ಸ್ ಕೊಡುತ್ತಿದ್ದರು. ಈಗ ಕರಂಟ್ ಬಂದ ಮೇಲೆ ಸ್ಥಿತಿ ಬದಲಾಗಿದೆ.

ನಮ್ಮ ತಾಯಿ ತಂದೆಗಳಿಗೆ ನಾನೇ ಕೊನೆಯ ಚಿಕ್ಕ ಮಗನಾದ್ದರಿಂದ ಆರೇಳು ವರ್ಷದ ವರೆಗೆ ತಾಯಿಯನ್ನು ಬಿಟ್ಟು ಇರುತ್ತಿರಲಿಲ್ಲ. ಕಲ್ಲಯ್ಯ ಅಂತಾ ಒಬ್ಬ ಅಯ್ಯನೋರು ಇದ್ದರು. ಜಂಗು ಕಟ್ಟಿಕೊಂಡು ಮನೆ ಮನೆಗೆ ಹಿಟ್ಟು ನೀಡಿಸಿಕೊಳ್ಳಲು ಬರುತ್ತಿದ್ದರು. ಅವರು ನನ್ನ ಕೈಯನ್ನು ನೋಡಿ, "ಅಲ್ಲವ್ವ, ನಿನ್ನ ಮಗ ಬಹಳ ಶ್ಯಾಣೆ ಅಕ್ಕಾನಿವ್ವ. ನಿಮ್ಮ ಹೆಸರ ತರತಾನು" ಅಂತಿದ್ದರು. ಆಗ ನಾನು ಆ ಜಂಗಮರ ಕೈ ನಡುಗುವುದನ್ನೂ, ಮಾತಾಡುವಾಗ ಜೊಲ್ಲು ಸುರಿಯುವುದನ್ನೂ ನೋಡಿ ಹೆದರಿ ನನ್ನವ್ವನ ಸೀರೆಯಲ್ಲಿ ಅಡಗಿಕೊಳ್ಳುತ್ತಿದ್ದೆ. ಆಗ ನಮ್ಮವ್ವ ತಲೆ ನೇವರಿಸುತ್ತ ರಮಿಸಿ ಕಲ್ಲಯ್ಯನವರಿಗೆ ಹಿಟ್ಟು ನೀಡಿ ಕಳಿಸುತ್ತಿದ್ದಳು.

ನಾನು ಹುಟ್ಟುವುದಕ್ಕಿಂತ ಮೊದಲು ಹುಟ್ಟಿದ ಎರಡು ಕೂಸುಗಳು ಹೆಸರಿಟ್ಟ ಕೂಡಲೇ ಸತ್ತಿದ್ದವಂತೆ. ಅದಕ್ಕಾಗಿ ನನ್ನ ಅಪ್ಪ ಅವ್ವ ನನ್ನ ಜನ್ಮವಾದ ಮೇಲೆ ನಮ್ಮೂರ ಸಮೀಪವಿರುವ ಮಾಟರಂಗಿ ಎಂಬ ಊರಿಗೆ ಹೋಗಿ ಅಲ್ಲಿ ಹನುಮಂತ ದೇವರ

ಪೂಜಾರಿಯನ್ನು ಹೆಸರಿಡುವ ಬಗ್ಗೆ ಕೇಳಿದರಂತೆ. ಅದಕ್ಕೆ ಹನುಮಂತದೇವರ ಪೂಜಾರಿ ಮೈ ತುಂಬಿಕೊಂಡಂತೆ ಮಾಡಿಕೊಂಡು ಕ್ಯಾಕಿ ಹೊಡೆದು ಬಂದ ಮುಗ್ಧ ಭಕ್ತರಿಗೆ ಹೆದರಿಕೆ ಹೊಗಿಸಿ, "ಈ ಹುಡುಗನಿಗೆ ಹೆಸರಿಟ್ಟ ಕೂಡಲೇ ಕಂಟಕ ಬರತೈತೆ, 'ಮುದುಕ, ಮುದುಕ' ಅಂತಾ ಕರೀರಿ" ಎಂದನಂತೆ. ಅಂತೆಯೇ ನನಗೆ ನಮ್ಮ ಅಪ್ಪ ಅವ್ವ ತೊಟ್ಟಿಲಲ್ಲಿ ಹಾಕಲಿಲ್ಲ. ಮುತ್ತೈದೆಯರಿಂದ ಹೆಸರಿಟ್ಟು ಕೂಗಿಸಲಿಲ್ಲ. ಅನಧಿಕೃತ ನಾಮಧಾರಿಯಾಗಿ, ಶಿಶುವಾಗಿದ್ದರೂ ಮುದುಕನಾಗಿ ಬೆಳೆಯಹತ್ತಿದೆ.

ಆರು ವರ್ಷ ತುಂಬಿರಬೇಕು. ನನ್ನ ಅಪ್ಪ ಅವ್ವ ಗಾಂವಠೀ ಶಾಲಾಮಾಸ್ತರ ಗೂಡು ಸಾಹೇಬರನ್ನು ಭೇಟಿಯಾಗಿ 'ಹುಡುಗನ್ನ ಹೆಸರು ಹಚ್ಚಿಕೋರಿ' ಎಂದರು. ಗಾಂವಠೀ ಶಾಲೆ ಹನುಮಂತ ದೇವರು ಮತ್ತು ಬಸವಣ್ಣ ದೇವರ ಗುಡಿಯಲ್ಲಿ ನಡೆಯುತ್ತಿತ್ತು. ನಮ್ಮ ಮನೆಯಿಂದ ದೂರವೇ ಇತ್ತು. ಮೊದಮೊದಲು ಶಾಲೆಗೆ ಹೋಗಲು ಒಲ್ಲೆ ಅಂತಾ ಅಳುತ್ತಿದ್ದೆ. ಆಗ ನಮ್ಮ ತಾಯಿ ತಂದೆಯರಲ್ಲಿ ಖಾಲಿ ಇದ್ದವರು ನನ್ನನ್ನು ಕರೆದುಕೊಂಡು, ಒಮ್ಮೊಮ್ಮೆ ಹೊತ್ತುಕೊಂಡು ಹೋಗಿ ಶಾಲೆಯಲ್ಲಿ ಕೂಡಿಸಿ ಬರುತ್ತಿದ್ದರು. ಅಳುವು ಬಹಳ ಜೋರಾಗಿತ್ತು ಅಂದರೆ ಶಾಲೆಯ ಹತ್ತಿರವಿದ್ದ ಗುಂಡೆ ಕಳಕಪ್ಪನ ಅಂಗಡಿಯಲ್ಲಿ ಕಡ್ಡಿ ಬೆಲ್ಲ ಕೊಡಿಸಿ ಕೂಡಿಸಿ ಬರುತ್ತಿದ್ದರು. ಆಗೇನು? ಎರಡು ಬಿಲ್ಲಿ ಕೊಟ್ಟರೆ ಬಕ್ಕಣ ತುಂಬಾ ಕಡ್ಡಿ ಬೆಲ್ಲ. ನನಗೆ ಬರಬರುತ್ತ ಶಾಲೆಗೆ ಹೋಗುವದೆ ಬೇಸಿ ಕಾಣತೊಡಗಿತು. ಕಡ್ಡಿ ಬೆಲ್ಲದ ಆಶೆಯಿಂದ ಅಕ್ಷರಾಭ್ಯಾಸ ಮಾಡತೊಡಗಿದೆ.

ಗೂಡುಸಾಹೇಬರು ಮುಸ್ಲೀಮರಾಗಿದ್ದು ಮಾಸ್ತರರಾಗಿದ್ದರೂ ನನ್ನ ಹೆಸರನ್ನು ನಮ್ಮ ತಾಯಿ ತಂದೆ ಹೇಳಿದಂತೆ 'ಮುದುಕಪ್ಪ ದಸ್ತಗೀರಸಾಹೇಬ ಪಿಂಜಾರ' ಅಂತಾ ಹೆಸರು ದಾಖಲಿಸಿಕೊಂಡಿದ್ದರು. ಮುದುಕಪ್ಪನನ್ನು ಬದಲಿಸಿ ಯಾವುದಾದರೂ ಮುಸ್ಲೀಮ ಹೆಸರನ್ನು ಅಂಟಿಸಬೇಕೆಂದು ಅವರಿಗೂ ಗೊತ್ತಾಗಲಿಲ್ಲವೇನೊ! ಇದೇ ಹೆಸರಿನಿಂದ ನಡೆಯಿತು ನನ್ನ ಪ್ರಾಥಮಿಕ ಶಿಕ್ಷಣ. ಏಳನೆ ವರ್ಗ ಪಾಸಾದೆ. ಎಸ್.ಎಸ್.ಸಿ. ಇದೇ ಹೆಸರಿನಿಂದ ಪಾಸಾದೆ. ಟಿ.ಸಿ.ಎಚ್. ಪಾಸಾದೆ. ಇದೇ ಹೆಸರಿನಿಂದ ಶಿಕ್ಷಕನಾಗಿ ೧೩ ವರ್ಷ ದುಡಿದೆ. ಮುಂದೆ ಗೆಳೆಯರು 'ಇದೇನೋ ನಿನ್ನ ಹೆಸರು? ಒಂದು ಹಿಂದೂ ಇದೆ, ಮುಂದೆ ಮುಸ್ಲೀಂ ಇದೆ' ಎನ್ನ ತೊಡಗಿದರು. ಆಗಲೆ ನಾನು ಕವನ ಲೇಖನ ಬರೆಯತೊಡಗಿದ್ದೆ. ಊರ ಹೆಸರು ಇಟ್ಟುಕೊಂಡು ಹೆಸರು ಬದಲಿಸಿಕೊಳ್ಳಬೇಕೆಂದು ನಿರ್ಧರಿಸಿ ಮುದುಕಪ್ಪನನ್ನು ಹೊಡೆದುಹಾಕಿ ಮಹಮದಲಿ ಆದೆ. ಪಿಂಜಾರನನ್ನು ಹಿಂದಿಟ್ಟು ಹುಟ್ಟಿದ ಊರು ಗೋಗೇರಿಯನ್ನು ತಗಲಿಸಿಕೊಂಡೆ. ಹೀಗಾಗಿ ಮಹಮದಲಿ ದಸ್ತಗೀರಸಾಹೇಬ ಗೋಗೇರಿ ಎಂಬ ಹೆಸರಿಂದ ಸೇವಾ ಪುಸ್ತಕದಲ್ಲಿಯೂ ಸಾಹಿತ್ಯ ಕ್ಷೇತ್ರದಲ್ಲಿಯೂ ಸ್ಥಾಪನೆಗೊಂಡು ಎಂ. ಡಿ. ಗೋಗೇರಿ ಹೆಸರಿಂದ ಪರಿಚಿತ ಗೊಂಡಿದ್ದೇನೆ. ಈ ರೀತಿ ಹೆಸರಿಟ್ಟುಕೊಂಡಾಗ ನನ್ನ ತಂದೆ ತಾಯಿಗಳು ಇಬ್ಬರೂ ಇದ್ದಿಲ್ಲ. ಅವರು ತೀರಿಕೊಂಡದ್ದು ೧೯೭೧. ನಾನು ಹೆಸರು ಬದಲಿಸಿಕೊಂಡದ್ದು ೧೯೭೩.

ನಾನು ಐದು ವರ್ಷದವನಿದ್ದಾಗ ನಮ್ಮ ತಾಯಿ ಮತ್ತು ನಮ್ಮ ಸೋದರಮಾವ ಹಾಗೂ ಬಾಲೇಸಾಹೇಬ ಎಂಬ ಸಂಬಂಧಿ ಒಟ್ಟು ನಾಲ್ಕಾರು ಜನರು ಹುಬ್ಬಳ್ಳಿ ನೋಡಲು

ಹೊರಟರು. ಆಗ ನಾನೂ ಬರುತ್ತೇನೆಂದು ಹಟ ಹಿಡಿದು ಅಳಹತ್ತಿದೆ. ನಿನ್ನ ಹೊತ್ತುಕೊಂಡು ನಾನ್ಹೇಗೆ ಹೋಗಲಿ ಅಂತಾ ನಮ್ಮ ಅವ್ವ ನನ್ನನ್ನು ಬಿಟ್ಟು ಹೋದಳು. ಆಗ ನಾನು ಅಂಗಳ ತುಂಬಾ ಹೊರಳಾಡಿ ಮಧ್ಯಾಹ್ನದ ವರೆಗೆ ಅತ್ತಿದ್ದೆ. ನನ್ನ ಇಬ್ಬರು ಅಕ್ಕಂದಿರು ನನ್ನನ್ನು ಹಿಡಿದು ಕಟ್ಟಿಹಾಕಿದ್ದರು. ಆಗ ಹುಬ್ಬಳ್ಳಿ ನೋಡುವದೆಂದರೆ ನಮ್ಮ ಹಳ್ಳಿಯ ಜನಕ್ಕೆ ಲಂಡನ್ ನೋಡಿದಷ್ಟೇ ಆನಂದವಾಗುತ್ತಿತ್ತು. 'ಹುಬ್ಬಳ್ಳಿ ನೋಡಲಿಕ್ಕೆ ಹೋಗ್ತಾರಂತೆ' ಅಂತಾ ಜನ ಆಶ್ಚರ್ಯದಿಂದ ಮಾತಾಡಿಕೊಳ್ಳುತ್ತಿದ್ದರು. ಹುಬ್ಬಳ್ಳಿಯಿಂದ ನನಗೆ ನಮ್ಮವ್ವ ಹುಬ್ಬಳ್ಳಿ ಮಾಟದ ಒಂದು ಗಿಂಡಿ ನೀರು ಕುಡಿಯಲು ತಂದಿದ್ದಳು. ಅದು ಬಹಳ ದಿನಗಳ ವರೆಗೆ ನಮ್ಮ ಮನೆಯಲ್ಲಿ ಇತ್ತು. ಈಗ ಎಲ್ಲೋ ಮಾಯವಾಗಿದೆ. ಹುಬ್ಬಳ್ಳಿ ನೋಡಿ ಬಂದವರು ರಾತ್ರಿ ಊಟವಾದ ಮೇಲೆ ಕಟ್ಟೀಮೇಲೆ ಕುಳಿತು ಓಣಿಯ ಜನರ ಮುಂದೆ ಹುಬ್ಬಳ್ಳಿ ಬಜಾರ, ಅಂಗಡಿ, ಮಹಡಿ ಮನೆಯ ಬಗ್ಗೆ ಕಣ್ಣು ಕಿಸಿದು ಹೇಳುತ್ತಿದ್ದರು. ಅವರು ಬಾಯಿ ತೆರೆದು ಕೇಳುತ್ತಿದ್ದರು. ರೇಲವೇದಲ್ಲಿ ಹೋಗುವಾಗ ತುಂಬಿದ ಚರಿಗಿ ತುಳುಕುವುದಿಲ್ಲ ಅಂತಾ ನಮ್ಮವ್ವ ನನ್ನನ್ನು ಬಗಲಲ್ಲಿಟ್ಟುಕೊಂಡು ಹೇಳುತ್ತಿದ್ದಳು. ಕಾಲಾಂತರದಲ್ಲಿ ನಾನು ಹುಬ್ಬಳ್ಳಿ ನಿವಾಸಿಯಾದುದು ಒಂದು ಸೋಜಿಗವೇ ಆಗಿದೆ.

ತಾಯಿಯ ವಾತ್ಸಲ್ಯ ಅನಂತವಾದುದು. ಆಪ್ಯಾಯಮಾನವಾದುದು. ಅಮೃತ ಸಮಾನವಾದುದು. ನನಗೆ ಇನ್ನೂ ನೆನಪಿದೆ— ನಾನು ತಾಯಿಯನ್ನು ಅಪ್ಪಿಕೊಂಡೇ ಮಲಗುತ್ತಿದ್ದೆ. ನನ್ನ ತಾಯಿಯ ಕೊರಳಲ್ಲಿಯ ಕರಿಮಣಿ ಸರವನ್ನು ಕೈಯಲ್ಲಿ ಹಿಡಿದುಕೊಂಡು ಬೆರಳಿಂದ ಜಪಮಣಿ ಎಣಿಸುವವರಂತೆ ಸರಿಸಾಡುತ್ತಿದ್ದೆ. ಒಮ್ಮೊಮ್ಮೆ ನಮ್ಮವ್ವ ಸಿಟ್ಟಿಗೆ ಬಂದು 'ಹರದ ಗಿರದಿ ಕೈ ಬಿಡೊ ಭಾಡೆ' ಎಂದು ಬೈಯುತ್ತಿದ್ದಳು. ಆದರೆ ನಾನು ಮತ್ತೆ ಹಟ ಮಾಡಿ ಕರಿಮಣಿ ಸರವನ್ನೇ ಹಿಡಿಯುತ್ತಿದ್ದೆ. ನಿಧಾನವಾಗಿ ನಿದ್ರೆ ಹೋಗುತ್ತಿದ್ದೆ.

ನಮ್ಮ ಊರಲ್ಲಿ ಆಗ ಹಿಟ್ಟಿನ ಗಿರಣಿಗಳು ಇರಲಿಲ್ಲ. ಪ್ರತಿ ಮನೆಯಲ್ಲೂ ಬೀಸುಕಲ್ಲುಗಳು ಇರುತ್ತಿದ್ದವು. ನಮ್ಮ ಅಪ್ಪ ಅವ್ವ ಎದುರಾಬದುರಾ ಕುಳಿತು ಜೋಳ ಬೀಸುತ್ತಿದ್ದರು. ಬೀಸುವಾಗ ಅವ್ವನ ತೊಡೆಯ ಮೇಲೆ ಮಲಗುತ್ತಿದ್ದೆ. ಆಕೆ ಸಣ್ಣದಾಗಿ ಹಾಡುವ ಬೀಸುಪದಗಳನ್ನು ಕೇಳುತ್ತಾ ನಿದ್ರೆ ಮಾಡುತ್ತಿದ್ದೆ. ಪಂಚಮಿ, ಮೊಹರಮ್ಮುಗಳಲ್ಲಿ ನನ್ನನ್ನು ಗಜೇಂದ್ರಗಡಾಕ್ಕೆ ಕರೆದುಕೊಂಡು ಹೋಗಿ ಹೊಸ ಅಂಗಿ, ಜರದ ಟೊಪ್ಪಿಗೆ ಕೊಡಿಸುತ್ತಿದ್ದರು. ಆಗ ನಾನು ಅಲ್ಲಿಯೆ ಅಂಗಿ ತೊಟ್ಟುಕೊಂಡು ಜರದ ಟೊಪ್ಪಿಗೆ ಹಾಕಿಕೊಂಡು ಮೈಸೂರ ಅರಸನಂತೆ ಬೀಗುತ್ತಿದ್ದೆ. ಪಟ ಆಡಿಸುವ ಸುಗ್ಗಿ ಬಂದಾಗ ನಮ್ಮ ಅಪ್ಪ ಜೀನಗಾರ ಮನೆಗೆ ಹೋಗಿ ಪಟ ಕೊಡಿಸುತ್ತಿದ್ದ. ನನ್ನ ಕನಸಿನಲ್ಲಿ ಪಟ ಹಾರಾಡುತ್ತಿತ್ತು. ನಾಲ್ಕನೇ ಇಯತ್ತೆ ಕಲಿಯುವಾಗ ಒಂದು ಮಸಿ ಪೆನ್ನು ಕೊಡಿಸಿದ್ದ. ಬರೆಯುವ ರೂಢಿ ಇರದ್ದರಿಂದ ಕೈತುಂಬ ಮಸಿ ಹತ್ತಿತ್ತು. ಅದನ್ನು ಮೂಸಿ ಮೂಸಿ ನೋಡಿ ಆನಂದಪಟ್ಟಿದ್ದೆ.

ಅಂದಿನ ಕಾಲದಲ್ಲಿ ನಮ್ಮ ಬಯಲು ನಾಡಿನಲ್ಲಿಯೂ ಮಳೆ ಚೆನ್ನಾಗಿ ಆಗುತ್ತಿತ್ತು. ಮೃಗಶಿರಾ ಮಳೆ ಧಾರಾಕಾರವಾಗಿ ಸುರಿಯುತ್ತಿತ್ತು. ನಮ್ಮ ಅಪ್ಪ ಅವ್ವನ ಜೊತೆ ಹೊಲಕ್ಕೆ ಹೋದಾಗ 'ಮಿರಗ ಕಳ್ಳಿ ಸಾಲಾಗ ವರಗ' ಅಂತಾ ಹೇಳಿ ನನ್ನನ್ನು ನಮ್ಮ ಹೊಲದ

ಬದುವಿನಲ್ಲಿ ಬೆಳೆದು ನಿಂತ ಕಳ್ಳಿಗಿಡದ ಚಾಟಿಗೆ ಕರೆದುಕೊಂಡು ನಿಲ್ಲುತ್ತಿದ್ದರು. ಅಷ್ಟೇ ಹೊಲದಲ್ಲಿ ನಮಗೆ ವರ್ಷಕ್ಕೆ ಸಾಲುವಷ್ಟು ಜೋಳ, ಸಜ್ಜೆ, ನವಣೆ, ತೊಗರಿ ಬೆಳೆಯುತ್ತಿದ್ದರು. ಒಂದು ಎಕರೆದಷ್ಟು ಇರುವ ಎರಿ ಹೊಲದಲ್ಲಿ ಗಜ್ಜರಿ ಬೆಳೆಯುತ್ತಿದ್ದರು. ನಮ್ಮ ತಂದೆ ಸಂಜೆಯಾಗುವ ತನಕ ಗಜ್ಜರಿ ಅಗೆದು ತೊಪ್ಪಲು ತೆಗೆದು ಬುಟ್ಟಿ ತುಂಬಿಕೊಂಡು ಬರುತ್ತಿದ್ದ. ನಮ್ಮ ತಾಯಿ ಓಣಿ ಓಣಿಗಳಲ್ಲಿ ಗಜ್ಜರಿ ಮಾರಿಕೊಂಡು ಬರುತ್ತಿದ್ದಳು. ಬಿಸಿಲು ತಿಂದ ಗಜ್ಜರಿಗಳು ಬಹಳ ಸಿಹಿಯಾಗಿರುತ್ತಿದ್ದವು. ಬೀಗರು ಬಂದರೆ ಗಜ್ಜರಿ ಹೊಲಕ್ಕೆ ಕರೆದುಕೊಂಡು ಹೋಗಿ ಗಜ್ಜರಿ ಕುದಿಸಿ ಕೊಡುತ್ತಿದ್ದರು.

ಶೇಂಗಾ ಸುಗ್ಗಿಯಲ್ಲಿ ಶೇಂಗಾ ಬಳ್ಳಿಗೆ ಬೆಂಕಿ ಹಚ್ಚಿ ಸುಟ್ಟ ಮೇಲೆ ಮಣ್ಣು ಸುರುವಿ ಆರಿದ ನಂತರ ಕೆಬರಿ ಕೆಬರಿ ಸುಟ್ಟ ಶೇಂಗಾ, ಹಸಿಮೆಣಸಿನಕಾಯಿ ಸುತ್ತಲೂ ಕುಳಿತು ನನ್ನನ್ನು ಕರೆದುಕೊಂಡು ತಿನ್ನುತ್ತಿದ್ದರು. ನಮ್ಮ ಮನೆಯ ಮುಂದೆ ಎತ್ತು ಮತ್ತು ಆಕಳು ಕಟ್ಟಲಿಕ್ಕೆ ಒಂದು ಚಪ್ಪರ ಹಾಕಿದ್ದರು. ಅದನ್ನು ಈಚಲ ಮರದ ಪರಕೆಗಳಿಂದ ನಿರ್ಮಿಸಲಾಗಿತ್ತು. ಎಲ್ಲರ ಮನೆಯ ಮುಂದೆ ಇಂತಹ ಚಪ್ಪರಗಳು ಸಾಮಾನ್ಯವಾಗಿದ್ದವು. ನನಗೆ ನಮ್ಮಪ್ಪ ಹುರಿಮುಂಬಿಸಿ ಒಂದು ಚೀಲ ಕೊಟ್ಟು ಹೊಲಕ್ಕೆ ಹುಲ್ಲು ತರಲು ಕಳಿಸುತ್ತಿದ್ದ. ನಾನು ಹೊಲದಲ್ಲಿ ಹುಟ್ಟಿದ ಹುಲ್ಲು ಕಿತ್ತು ಅರ್ಧ ಚೀಲ ತುಂಬಿಕೊಂಡು ಹೊತ್ತು ತರುತ್ತಿದ್ದೆ. ಮಗ್ಗಲು ಮನೆಯವರ ಮುಂದೆ 'ನಮ್ಮ ಮುದುಕ ಆಕಳಿಗೆ ಹುಲ್ಲು ತಂದು ಹಾಕಿದ' ಎಂದು ಹೊಗಳುತ್ತಿದ್ದ. 'ಈಗಲೇ ಬಾಳೇವಕ ಹತ್ತಿದ ನಿನ್ನ ಮಗ' ಅಂತಾ ಅವರು ಅನ್ನುತ್ತಿದ್ದರು. ನಾನು ಮರುದಿನ ಮತ್ತೆ ಹುಲ್ಲು ತರಲು ಓಡುತ್ತಿದ್ದೆ. ಇದರ ಜೊತೆಗೆ ಶಾಲೆಯನ್ನೂ ಕಲಿಯುತ್ತಿದ್ದೆ.

ನಮ್ಮ ತಂದೆ ತಾಯಿಗಳಿಗೆ ನನಗೆ ವಿದ್ಯೆ ಕಲಿಸಬೇಕೆಂಬ ಗುರಿ ಇರಲಿಲ್ಲ. ಅಲ್ಪ ಸ್ವಲ್ಪ ನಮ್ಮಪ್ಪ ಓದು ಬರಹ ಕಲಿತಿದ್ದರು. ನಮ್ಮ ತಾಯಿಯಂತೂ ನಿರಕ್ಷರಿ. ಅಂದಿನ ನಮ್ಮೂರ ವಾತಾವರಣವೇ ಹಾಗಿತ್ತು. ಗಾಂವಠೀ ಶಾಲೆಯಲ್ಲಿ ನಾಲ್ಕನೇ ಇಯತ್ತೆ ಕಲಿತು ಹಿರೇ ಆಟದ ಮಾತುಗಳನ್ನು ಓದಲು ಬಂದರೆ ನಮ್ಮೂರಲ್ಲಿ ಅವನೊಬ್ಬ ದೊಡ್ಡ ವಿದ್ಯಾವಂತ ಎಂದು ತಿಳಿಯುತ್ತಿದ್ದರು. ನನ್ನ ಜೊತೆಗೆ ನಮ್ಮೂರಲ್ಲಿ ನಾಲ್ಕನೇ ಇಯತ್ತೆ ವರೆಗೆ ಕಲಿತ ಹುಡುಗರೆಲ್ಲ ಶಾಲೆ ಬಿಟ್ಟು ಒಕ್ಕಲುತನ, ತೋಟಪಟ್ಟಿ ಮಾಡತೊಡಗಿದ್ದರು. ಶ್ರೀಮಂತರಿದ್ದರೂ ಗಜೇಂದ್ರಗಡಾಕ್ಕೆ ಕಳಿಸಿ ಕಲಿಸುತ್ತಿದ್ದಿಲ್ಲ. ಆದರೆ ನನ್ನನ್ನು ನಮ್ಮ ತಾಯಿ ತಂದೆ ಐನೇ ವರ್ಗಕ್ಕೆ ಕುರುಡಿಗಿಗೆ ಕರೆದುಕೊಂಡು ಹೋಗಿ ನಮ್ಮ ಸೋದರಮಾವನ ಮನೆಯಲ್ಲಿ ಇಟ್ಟರು. ನಮ್ಮ ತಾಯಿಯು ತನ್ನ ಅಣ್ಣ ನಬಿಸಾಹೇಬನಿಗೆ ಒತ್ತಾಯ ಮಾಡಿದ್ದಕ್ಕೆ ನಬಿಸಾಹೇಬರು ನನ್ನನ್ನು ಕುರುಡಿಗಿಯಲ್ಲಿ ಇಟ್ಟುಕೊಂಡರು.

ಹತ್ತು ವರ್ಷದವನಿದ್ದೆ. ಅತ್ತು ಕರೆದು ಮಾಡಲಿಲ್ಲ. ಶಾಲೆ ಕಲಿಯಬೇಕೆಂಬ ಮುಗ್ಧ ಆಶೆ ಚಿಗುರೊಡೆದಿತ್ತು. ಊಟದ ಕಡೆ ಲಕ್ಷ್ಯ ಇದ್ದಿಲ್ಲ. ಬೀಗರ ಮನೆಯಲ್ಲಿ ಹೇಳಿದ ಕೆಲಸ ಮಾಡುತ್ತಿದ್ದೆ. ನನ್ನ ತಾಯಿ ಜೀವ ನೆನೆಸಿದಾಗೊಮ್ಮೆ ಕರಚಿಕಾಯಿ ಸುರುಳಿ ಹೋಳಿಗಿ ಮಾಡಿಕೊಂಡು ಬಂದು ಮಾತಾಡಿಸಿ ಹೋಗುತ್ತಿದ್ದಳು. ಕುರುಡಿಗಿಗೆ ಆಗ ಬಸ್ಸಿನ ಸೌಕರ್ಯವಿದ್ದಿಲ್ಲ. ಅಬ್ಬಿಗೇರಿಯಿಂದ ಆರು ಮೈಲು ನಡೆದು ಬರುತ್ತಿದ್ದರು. ನಮ್ಮ

ಸೋವರಮಾವನ ಮನೆಯಲ್ಲಿ ಸಾಬವ್ವ ಅಂತಾ ಒಬ್ಬಾಕೆ ಮುದುಕಿ ಇದ್ದಳು. ಆಕೆ ನನಗೆ ಸೇರುತ್ತಿರಲಿಲ್ಲ. ಉಂಡರೂ ತಿಂದರೂ ಬೈಯುತ್ತಿದ್ದಳು. ನಮ್ಮ ಮಾವ ನನಗೊಂದು ಹೊಸ ಅಂಗಿ ವೀರಭದ್ರದೇವರ ಜಾತ್ರೆಯಲ್ಲಿ (೨ ರೂ. ಕೊಟ್ಟು) ತಂದಿದ್ದ. ಆಗ ಆಕೆ ಅವನೊಡನೆ ಜಗಳ ತೆಗೆದಿದ್ದಳು.

ಸಂಜೆಯಾಗುತ್ತಲೇ ನನಗೆ ಕೋಳಿ ಹಿಡಿದು ಮುಚ್ಚಲು ಹೇಳುತ್ತಿದ್ದಳು. ಕೈಗೆ ಸಿಕ್ಕದ ಕೋಳಿಗಳನ್ನು ಬೆನ್ನುಹತ್ತಿ ಹಿಡಿದು ಪುಟ್ಟಿ ಹೊಗಿಸುವದೇ ನನ್ನ ಸಂಜೆಯ ಕಾರ್ಯವಾಗಿತ್ತು. ಸುಗ್ಗಿಯ ವೇಳೆಯಲ್ಲಿ ಹೊಲಕ್ಕೆ ಹೋಗಿ ಬುತ್ತಿ ಕೊಡುತ್ತಿದ್ದೆ. ಅಂತು ಇಂತು ಒಂದು ವರ್ಷ ಪೂರ್ತಿ ಮಾಡಿ ೫ನೇ ವರ್ಗ ಪಾಸು ಮಾಡಿದೆ. ನಮ್ಮ ಅಪ್ಪನಿಗೆ ಸಾಬವ್ವನ ಸಿಡಿ ಮಿಡಿ ಗೊತ್ತಾಗಿ ನನ್ನನ್ನು ಮರಳಿ ಗೋಗೇರಿಗೆ ಕರೆದುಕೊಂಡು ಬಂದಳು.

ಊರಲ್ಲಿಯ ಜನರು ನಮ್ಮಪ್ಪನಿಗೆ 'ದಸ್ತಪ್ಪ, ಹುಡುಗನ್ನ ಶಾಲೆ ಬಿಡಿಸಬೇಡ, ಶ್ಯಾಣ್ಯಾ ಆಕ್ಯಾನಿವ್ನ' ಅಂತಾ ಹುರಿದುಂಬಿಸಿದರು. ಮತ್ತೆ ನನ್ನ ತಂದೆ ಗಜೇಂದ್ರಗಡಾಕ್ಕೆ ಕರೆತಂದು ೬ನೇ ವರ್ಷಕ್ಕೆ ಹೆಸರು ಹಚ್ಚಿದರು. ನಮ್ಮೂರ ಭಾಗವಾನರ ಶ್ಯಾವಂತ್ರವ್ವ ಎಂಬ ಹೆಣ್ಣುಮಗಳನ್ನು ಗಜೇಂದ್ರಗಡಾಕ್ಕೆ ಕೊಟ್ಟಿದ್ದರು. ಆಕೆಗೆ ಗುಂಡಮ್ಮ ಎಂದು ಕರೆಯುತ್ತಿದ್ದರು. ನಮ್ಮ ತಂದೆ ಹೋಗಿ 'ಗುಂಡಮ್ಮ, ನಮ್ಮ ಮುದುಕನ್ನ ನಿಮ್ಮ ಮನೆಯಲ್ಲಿ ಇಟ್ಟುಕೊ, ಆರನೆಯತ್ತೆ ಓದತಾನ'. ವಾರಕ್ಕೆ ೨ ರೂ. ಕೊಡ್ತೀನಿ. ಊಟ ಕೊಡು, ಅಂದ. ನನ್ನ ನಶೀಬಕ್ಕೆ ಆ ತಾಯಿ ಒಪ್ಪಿಕೊಂಡಳು. ನಾನು ನನ್ನ ಪಾಟಿಚೀಲದೊಂದಿಗೆ ಗುಂಡಮ್ಮನ ಮನೆಯಲ್ಲಿ ಬಿಡಾರ ಹೂಡಿದೆ. ಅವರ ಮನೆಯಲ್ಲಿ ಎರಡು ಮೂರು ಚಿಕ್ಕ ಮಕ್ಕಳಿದ್ದವು. ಅವುಗಳನ್ನು ಸಂಭಾಳಿಸುತ್ತ ಶಾಲೆಗೆ ಹೋಗತೊಡಗಿದೆ. ತರಕಾರಿ ಮಾರಲಿಕ್ಕೆ ಹಳ್ಳಿಗೆ ಹೋದ ಗುಂಡಮ್ಮ ಮಧ್ಯಾಹ್ನ ಎರಡು ಗಂಟೆಯ ಹೊತ್ತಿಗೆ ಬರುತ್ತಿದ್ದಳು. ಅವರು ಊಟಕ್ಕೆ ಕೊಟ್ಟಾಗ ಉಂಡು ಶಾಲೆಗೆ ಹೋಗುತ್ತಿದ್ದೆ. ನಮ್ಮ ತಂದೆ ಮಂಗಳವಾರ ಬಂದು ಒಂದು ಜೋಡಿ ಹಣಿಕಟ್ಟು ಮಾರಿ ನನ್ನ ಊಟದ ಬಿಲ್ಲು ೨ ರೂ. ಗುಂಡಮ್ಮನಿಗೆ ಕೊಡುತ್ತಿದ್ದ. (ಆಗ ೧೯೫೪ ರಲ್ಲಿ ೨ ರೂ.ಗೆ ೧ ಗಿದ್ನ ಜೋಳ : ೧೫ ಕೆ.ಜಿ.) ಹೀಗೆ ಒಂದು ವರ್ಷ ಪೂರೈಸಿ ೬ನೇತ್ತ ಪಾಸಾದೆ.

ವಾರಕ್ಕೆ ಎರಡು ರೂಪಾಯಿ ಕೊಡುವದೂ ಕಠಿಣವಾಗಿತ್ತೆಂದು ಕಾಣುತ್ತದೆ. ಆಗ ನಮ್ಮ ತಂದೆ ಮತ್ತೊಂದು ವಿಚಾರ ಮಾಡಿದರು. ತನ್ನ ಅಣ್ಣನ ಮಗಳನ್ನು ನಿಡಗುಂದಿಗೆ ಕೊಟ್ಟಿತ್ತು. ಆಕೆಯ ಹೆಸರೂ ಅಲ್ಲಮ್ಮ ಅಂತಾ ಇತ್ತು. ಆಕೆಗೆ ಮೂರು ಗಂಡುಮಕ್ಕಳು ಇದ್ದರು. ವ್ಯಾಪಾರದೊಂದಿಗೆ ಒಕ್ಕಲುತನವೂ ಇತ್ತು. ಅಲ್ಲಮ್ಮ ನಮ್ಮೂರಲ್ಲಿ ಲಾವಣಿ ಹೊಲ ಮಾಡಿದ್ದರಿಂದ ಆಗಾಗ ನಮ್ಮೂರಿಗೆ ಬರುತ್ತಿದ್ದಳು. ಒಮ್ಮೆ ಬಂದಾಗ ನಮ್ಮ ತಂದೆಯವರು ಅಲ್ಲಮ್ಮನಿಗೆ ಊಟ ಮಾಡಿಸಿ 'ನಮ್ಮ ಮುದುಕನ್ನ ನಿಮ್ಮ ಊರಾಗ ಒಂದು ವರ್ಷ ಇಟ್ಟುಕೊಂಡು ಯೋಳನೆ ಇಯತ್ತೆ ಕಲಿಸು, ನಿಮಗ ನಾನು ಇಲ್ಲೆ ಏನಾದರೂ ಕುಂಟಿ ರಂಟಿ ಹೊಡೆದುಕೊಡ್ತೀನಿ' ಅಂತಾ ಹೇಳಿದರು. ಅಲ್ಲಮ್ಮನಿಗೆ ನಮ್ಮ ಅಪ್ಪನ ವಿಚಾರ ಒಪ್ಪಿಗೆಯಾತು. ಆಕೆ 'ಹಾಗೆ ಮಾಡು ಕಾಕಾ, ಮುದಿಯನ್ನ ಕರೆದುಕೊಂಡು ಹೋಗ್ತೀನಿ' ಎಂದು ಮುದುಕನನ್ನು ಮುದಿಯನನ್ನಾಗಿ ಮಾಡಿ ಕರೆದುಕೊಂಡು ಹೋದಳು. ನನ್ನನ್ನು

ನೋಡಿ ಆಕೆಯ ಖಾಸ ತಮ್ಮನ ಮಗ ಹುಸೇನಿಯೂ ೫ನೇ ವರ್ಗ ಕಲಿಯಲು ಬಂದು ಮೂರು ತಿಂಗಳಲ್ಲಿ ಅಳುತ್ತಾ ಊರಿಗೆ ಓಡಿ ಬಂದ. ಆದರೆ ನಾನು ಮಾತ್ರ ಮಣ್ಣೊಡ್ಡರ ಎಂಬ ಗುರುಗಳ ಕೈಯಲ್ಲಿ ಹೊಡೆತ ತಿನ್ನುತ್ತ ಅಭ್ಯಾಸ ಮಾಡುತ್ತ, ಗುರುಗಳ ಮಕ್ಕಳನ್ನು ಆಡಿಸುತ್ತ, ಒಮ್ಮೊಮ್ಮೆ ಅಲ್ಲಿಯೇ ಉಣ್ಣುತ್ತ, ಹಗಲು ರಾತ್ರಿ ಓದಿ ೭ನೇ ವರ್ಗ ಪಾಸಾದೆ.

ರೋಣ ತಾಲೂಕಿನಲ್ಲಿ ಗಜೇಂದ್ರಗಡ ದೊಡ್ಡ ಪಟ್ಟಣವಾಗಿದೆ. ವ್ಯಾಪಾರಕ್ಕಾಗಿ ಆಗಿನಿಂದಲೂ ಪ್ರಸಿದ್ಧ. ಆದರೆ ಆಗ ಶಿಕ್ಷಣದಲ್ಲಿ ಹಿಂದುಳಿದಿತ್ತು. ೧೯೫೬ ರ ವರೆಗೂ ಅಲ್ಲಿ ಪ್ರೌಢಶಾಲೆ ಇರಲಿಲ್ಲ. ಅದೇ ವರ್ಷ ಗಜೇಂದ್ರಗಡಾದ ಕೆಲವು ಹಿರಿಯರು ಮತ್ತು ಅಂಗಡಿ ಎಂಬ ಶಿಕ್ಷಕರ ಪ್ರಯತ್ನದಿಂದ ಕಾಲಕಾಲೇಶ್ವರ ಹೈಸ್ಕೂಲು ಸ್ಥಾಪನೆಯಾಯಿತು. ಪರಸ್ಥಳದ ಹುಡುಗರಿಗೆ ವಸತಿ ಊಟಕ್ಕಾಗಿ ಮಹಾಂತೇಶ್ವರ ಬೋರ್ಡಿಂಗ್ ಪ್ರಾರಂಭಿಸಿದರು. ನಾನು ಏಳನೇ ವರ್ಗ ಪಾಸಾಗುವದಕ್ಕೂ ಗಜೇಂದ್ರಗಡಾದಲ್ಲಿ ಈ ಶೈಕ್ಷಣಿಕ ಸೌಲಭ್ಯಗಳು ಪ್ರಾರಂಭವಾಗುವದಕ್ಕೂ ಸರಿಹೋಯ್ತು. ಮತ್ತೆ ನನ್ನೂರ ಜನ ದಸ್ತಪ್ಪನಿಗೆ ಗಂಟುಬಿದ್ದರು. ಆಗ ನಮ್ಮಪ್ಪ ಹೆದರಿ 'ಹೈಸ್ಕೂಲ ಕಲಿಸೋ ಕಿಮ್ಮತ್ತೇನ್ರಿ ನಮ್ಮದು, ಬಹಳ ಖರ್ಚು ಬರುತ್ತ' ಎಂದ. 'ಊಟಕ್ಕ ಬೋರ್ಡಿಂಗಿನ್ಯಾಗ ಇಡೂನು. ಹುಡುಗ ಕಲೀಲಿ' ಅಂತಾ ನಮ್ಮಕ್ಕನ ಗಂಡ ಹೊನ್ನೂರಸಾಬನೂ ಬೆಂಬಲ ಕೊಟ್ಟ. ನಮ್ಮ ಅಣ್ಣ ಬಾಬುಸಾಬನೂ ಬೆಂಬಲ ಕೊಟ್ಟ. ಯಾರ್‍ಯಾರೊ ಕೊಟ್ಟ ೫ ರೂ., ೧೦ ರೂ. ಪಟ್ಟಿ ಕೂಡಿಸಿ ನಾಲ್ವತ್ತು ರೂಪಾಯಿ ಮಾಡಿಕೊಂಡು ಗಜೇಂದ್ರಗಡಾಕ್ಕೆ ನಮ್ಮ ಅಣ್ಣ ಮತ್ತು ನಮ್ಮ ತಂದೆ ಕರೆದುಕೊಂಡು ಬಂದು ಹೆಡ್‌ಮಾಸ್ಟರ್ ಬಸವರಾಜರನ್ನು ಭೇಟಿಯಾದರು. ಮಾಫೀ ಮಾಡುತ್ತೇನೆ, ಹೆಸರು ಹಚ್ಚಿಸಿರಿ ಎಂದು ಹೇಳಿ ಬೋರ್ಡಿಂಗಿಗೆ ವರ್ಷಕ್ಕೆ ೧೦ ರೂಪಾಯಿ ಕೊಡ್ರಿ ಅಂದರು. ಅದರಂತೆ ನಮ್ಮಪ್ಪ ನಾಲ್ಕು ವರ್ಷವೂ ಕೊಟ್ಟು ನಿಭಾಯಿಸಿದರು. ನಮ್ಮ ತಾಯಿ ಪ್ರತಿ ರವಿವಾರ ಬರಬೇಕೆಂದು ಹೇಳುತ್ತಿದ್ದಳು. ಓದುವವರನ್ನು ಕಂಡು ಓದು, ಹಾಡುವವರನ್ನು ಕಂಡು ಹಾಡು ಅನ್ನುವಂತೆ ನಾನು ಓದುವದು, ಹಾಡುವದು, ಭಜನೆ ಮಾಡುವದು (ಶ್ರಾವಣದಲ್ಲಿ) ಮಾಡುತ್ತ ಹೈಸ್ಕೂಲು ಮತ್ತು ಹಾಸ್ಟೇಲಿನಲ್ಲಿ ಎದ್ದು ಕಾಣತೊಡಗಿದೆ.

ಇತ್ತ ನಮ್ಮ ಪಿಂಜಾರ ಮನೆತನಗಳಲ್ಲಿ ಕೆಲವು ಹುಡುಗರನ್ನು ಆಗಲೇ ಶಾಲೆ ಬಿಡಿಸಿ ಹಗ್ಗ ಮಾಡುವ ಧಂಧೆಗೆ ಹಚ್ಚಿದ್ದರು. ಬಾರಕೋಲು ಮಾಡುವದು, ಎತ್ತಿನ ಹಣೆಕಟ್ಟು ಮಾಡುವದು, ಮೂಗುದಾರ, ಮಕಡ ಮಾಡಿಕೊಂಡು ಸಂತೆ ಜಾತ್ರೆಗಳಲ್ಲಿ ಅಂಗಡಿ ಹಚ್ಚಿ ಮಾರಲಿಕ್ಕೆ ಕಳಿಸುತ್ತಿದ್ದರು. ಆ ಹುಡುಗರಿಗೂ ಅಷ್ಟೇ ಬೇಕಿತ್ತು. ವ್ಯಾಪಾರದಿಂದ ಕೈಯಲ್ಲಿ ಹಣ ಓಡಾಡುತ್ತಿತ್ತು. ನರಸಿಂಗಸಾ ಚುಟ್ಟಾ ಸೇದಲು ಕಲಿತರು. ಖಾನಾವಳಿ ಮಟನ್ ಊಟ, ಚಿಕನ್ ಊಟ ಮಾಡುವ ಮೊದಲು ಸ್ವಲ್ಪ ಕಂಟ್ರಿ ಮಾಲು ತೊಕ್ಕೊಳ್ಳತೊಡಗಿದರು. ಕ್ರಾಪು ಬಿಟ್ಟರು. ಚಪ್ಪಲ ಮೆಟ್ಟಿ ನಡೆಯತೊಡಗಿದರು. ಇಸ್ತ್ರಿ ಅಂಗಿ ತೊಡಹತ್ತಿದರು. ಆದರೆ ಇವಾವೂ ನನಗೆ ಸಿಕ್ಕಲಿಲ್ಲ. ನಮ್ಮ ತಂದೆ ತಾಯಿಯರು ನನಗೆ ಹಗ್ಗ ಮಾಡಲು ಹಚ್ಚಲಿಲ್ಲ. ಆದರೂ ನೋಡಿಕೊಂಡು ಕೈಗಾರಿಕೆ ವಸ್ತುಗಳನ್ನು ಮಾಡಲು ಕಲಿತಿದ್ದೆ.

ನಮ್ಮ ಪಿಂಜಾರರ ಈ ಕೈಕಸಬು ಮಾಡುತ್ತ ಬಂದವರು ಯಾರೂ ಹೆಚ್ಚಿನ ಪ್ರಗತಿ ಹೊಂದಿಲ್ಲ. ಹೊಟ್ಟೆಬಟ್ಟೆಗೆ ಸರಿ. ವರ್ಷಕ್ಕೊಮ್ಮೆ ಎತ್ತಿನ ಶೃಂಗಾರಕ್ಕಾಗಿ ಕೊಳ್ಳುವ ಈ

ನೂಲಿನ ಸಾಮಾನುಗಳು ಲಾಭ ಕೊಡುವಂಥವು ಅಲ್ಲ. ಊರೂರು ತಿರುಗಿ, ಕೈಗೆ ಬಂದ ರೇಟಿಗೆ ಕೊಟ್ಟು ನೂಲಿನ ಖರೀದಿ ಹಣ ಉಳಿಸಿಕೊಂಡು ಲಾಭ ಕೂಲಿ ದೊರಕಿಸಿಕೊಳ್ಳುವದು ದುಸ್ತರವಾಗಿದೆ. ಅಂದು ಹೇಗಿದ್ದರೂ ಇಂದೂ ಹಾಗೇ ಇದ್ದಾರೆ. ಟ್ರ್ಯಾಕ್ಟರುಗಳು ಬಂದು ಎತ್ತುಗಳು ಕಡಿಮೆಯಾದ್ದರಿಂದ ನಮ್ಮ ಕೈಕಸಬು ಇನ್ನೂ ಕೆಳಮಟ್ಟಕ್ಕೆ ಕುಸಿದಿದೆ. ನಮ್ಮ ಮನೆಯೂ ಇದಕ್ಕೆ ಹೊರತಾಗಿಲ್ಲ. ಈ ಹೊತ್ತಿಗಾಗಲೇ ನಮ್ಮ ಮನೆಯಲ್ಲಿ ಹಲವಾರು ಏರುಪೇರುಗಳಾದವು. ಮನೆಯ ಹಿರಿತನ ನಮ್ಮ ಅಣ್ಣನ ಕೈಯಲ್ಲಿ ಬಂದಿತ್ತು. ಒಕ್ಕಲುತನವನ್ನು ನಿಲ್ಲಿಸಿ ಎತ್ತುಗಳನ್ನು ಮಾರಿದ್ದ. ನಮ್ಮ ತಂದೆ ತಾಯಿಯರಿಗೆ ದಮ್ಮು (ಅಸ್ತಮಾ) ಗಂಟು ಬಿದ್ದಿತ್ತು. ಮಳೆಗಾಲದಲ್ಲಿ ನಮ್ಮ ತಾಯಿ ತಲೆದಿಂಬನ್ನು ಮುಖದ ಕೆಳಗಿಟ್ಟು ತೇಕುತ್ತಾ ಮಲಗಿಬಿಡುತ್ತಿದ್ದಳು. ಡಾಕ್ಟರರಿಗೆ ತೋರಿಸಲು ಹಣವೇ ಇರುತ್ತಿರಲಿಲ್ಲ. ಇಂಥದ್ದರಲ್ಲಿ ನಮ್ಮ ಅಣ್ಣ ಬೇರೆಯಾಗಿ ಗದಗ ಬೆಟಗೇರಿಗೆ ಬಂದುಬಿಟ್ಟ. ಈ ೨-೩ ವರ್ಷಗಳಲ್ಲಿ ಹೇಗೋ ಏನೋ ಮಾಡಿ ನಾನು ಬೋರ್ಡಿಂಗಿನಲ್ಲಿದ್ದುಕೊಂಡೇ ಎಸ್.ಎಸ್.ಸಿ. ಪಾಸು ಮಾಡಿದೆ. ಮುಂದೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಕಾಲೇಜು ಕಲಿಸುವ ಶಕ್ತಿಯಂತೂ ಇರಲೇಯಿಲ್ಲ.

ನನಗೆ ಅಲ್ಪ ಸ್ವಲ್ಪ ಜವಾಬ್ದಾರಿ ಬಂದಿತ್ತು. ಆಗ ನಮ್ಮ ಮುಂದೆ ಮಾಸ್ತರರೇ ಕಾಣುತ್ತಿದ್ದರು. ಜನರೂ ಮಾಸ್ತರ ಆಕ್ಕಾನಿವ್ನ ಅನ್ನುತ್ತಿದ್ದರು. ಆಗ ನಮ್ಮ ತಾಯಿ ತಂದೆಗೆ ನೂರು ರೂಪಾಯಿ ನೋಡದವರಿಗೆ ಸಾವಿರ ರೂಪಾಯಿ ಕೈಯಾಗ ಕೊಟ್ಟಂತೆ ಆಗುತ್ತಿತ್ತು. ಅದೇ ವೇಳೆಗೆ ಪೀರಸಾಬ ಎಂಬ ನಮ್ಮೊಬ್ಬ ಸಂಬಂಧಿಕ ನಮ್ಮ ಅಪ್ಪನಿಗೆ 'ಟಿ.ಸಿ.ಎಚ್. ಮಾಡಿಸಿಬಿಡ್ರಿ. ಒಂದು ತಿಂಗಳದಾಗ ಮಾಸ್ತರ ಆಗಿಬಿಡ್ತಾನು' ಅಂತಾ ಹುರುಪು ತುಂಬಿಸಿದ. ನಾನೂ ನಮ್ಮ ತಂದೆ ಪ್ರಯತ್ನ ಮಾಡೂನು ಅಂತಾ ನಮ್ಮೂರ ಹತ್ತಿರವೇ ಇರುವ ನಾಗರಕೊಪ್ಪಕ್ಕೆ ಹೋಗಿ ಅಲ್ಲಿ ಬಡಿಗೇರ ಮಾನಪ್ಪ ಎಂಬುವರನ್ನು ಭೇಟಿಯಾಗಿ ನಮ್ಮ ಇಂಗಿತ ತಿಳಿಸಿ ೧೫೦ ರೂ. ಸಾಲ ಬೇಡಿದೆವು. ಅವರು ನನ್ನ ಅಭಿಮಾನಿಯಾಗಿದ್ದರು. ಕೇಳಿದೊಡನೆ ಮುಖದ ಮೇಲೆ ಯಾವುದೇ ವಿಕಾರ ತಾಳದೆ ಒಳಗೆ ಹೋಗಿ ದೀಡನೂರು ರೂಪಾಯಿ ತಂದು ಕೊಟ್ಟರು. ನಾನು ಅವರಿಗೆ ಕೈಮುಗಿದು, ನೌಕರಿ ಬಂದ ಕೂಡಲೇ ನಿಮ್ಮ ಸಾಲ ತೀರಸ್ತೇನೆ ಅಂತಾ ಹೇಳಿ ಕೃತಜ್ಞತೆ ಸಲ್ಲಿಸಿದೆ. ಅಪ್ಪ ನಾನು ಮನೆಗೆ ಬಂದೆವು.

ನಮ್ಮ ತಂದೆಯವರು ಹೇಳಿದರು : 'ಮುದುಕ, ಕೊಟ್ಟವರ ಸಾಲ ಹೇಳಿದ ವ್ಯಾಳೇಕ ಮುಟ್ಟಿಸಬೇಕು. ಅವರು ಕೇಳುವದಕ್ಕಿಂತ ಮೊದಲೇ ಕೊಡಬೇಕು. ಅಂದ್ರ ನಂಬಿಗಿ ಉಳಿಯುತ್ತ, ಮತ್ತೊಮ್ಮೆ ಕೇಳಿದರ ಕೊಡ್ತಾರು' ಎಂದು ನನಗೆ ಕೊಡುಕೊಳ್ಳಿಯ ಬಗ್ಗೆ ಪಾಠ ಹೇಳಿದರು.

ನಾನು ಅದೇ ಮಾತನ್ನು ನೆನಪಿನಲ್ಲಿಟ್ಟುಕೊಂಡು ಇಂದಿಗೂ ನಡೆಸುತ್ತಾ ಬಂದಿದ್ದೇನೆ. ಸಾಲ ಮಾಡಿದ್ದು ಬಹಳ ಕಡಿಮೆ. ಈಗಂತೂ ಇಲ್ಲವೇ ಇಲ್ಲ. ಮುಂದೆ ೪-೬ ದಿನಗಳಲ್ಲಿ ನನ್ನ ಗೆಳೆಯ ಕಳಕಪ್ಪ ಅಬ್ಬಿಗೇರಿ ಎಂಬುವನು ಟಿ.ಸಿ.ಎಚ್. ಕಲಿಯಲು ಹುಬ್ಬಳ್ಳಿಗೆ ಹೊರಟ. ಅವನ ಜೊತೆಗೆ ನಾನೂ ಹೋದೆ. ಜೆ.ಜಿ.ಕೆ.ಪಿ.ಟಿ. ಕಾಲೇಜಿನಲ್ಲಿ ಹೆಸರು ಹಚ್ಚಿ ೨೫ ರೂ. ಕೊಟ್ಟು ಮೂರುಸಾವಿರ ಮಠದ ಬೋರ್ಡಿಂಗಿನಲ್ಲಿ ಒಂದು ವರ್ಷ ಊಟ ಮಾಡಿದೆ. ಮೇ ೧೯೬೧ ರಲ್ಲಿ ಟಿ.ಸಿ.ಎಚ್. ಪರೀಕ್ಷೆ ಬರೆದು ಉತ್ತೀರ್ಣನಾದೆ. ೪-೬ ಜಿಲ್ಲೆಯವರು

ಶಿಕ್ಷಕರ ಹುದ್ದೆಗೆ ಅರ್ಜಿ ಕರೆದಿದ್ದರು. ನಾನು ಧಾರವಾಡ ಜಿಲ್ಲೆಗೂ ರಾಯಚೂರ ಜಿಲ್ಲೆಗೂ ಅರ್ಜಿ ಹಾಕಿದ್ದೆ. ಮೊದಲು ರಾಯಚೂರ ಜಿಲ್ಲೆಯಿಂದ ನೇಮಣೂಕಿ ಹುಕುಂ ಬಂದಿತು. ದೇವದುರ್ಗ ತಾಲೂಕಿನ ಬೊಮ್ಮನಹಳ್ಳಿಗೆ ಹೋಗಿ ಹೊಸದಾಗಿ ನಾನೇ ಶಾಲೆಯನ್ನು ಸ್ಥಾಪಿಸಬೇಕಿತ್ತು. ಆಗ ನನಗೆ ೧೯ ವರ್ಷ.

ಹೊಸ ಧೋತ್ರ ಉಟ್ಟುಕೊಂಡು ನೆಹರು ಶರ್ಟ್ ತೊಟ್ಟುಕೊಂಡು ಗಾಂಧೀ ಟೋಪಿ ತಲೆಗಿಟ್ಟುಕೊಂಡು ಪುಟ್ಟ ಮಾಸ್ತರನಾಗಿ ಬೇರೆ ಜಿಲ್ಲೆಯ ದೂರದ ಹಳ್ಳಿಗೆ ಹೋಗುವಾಗ ನಮ್ಮ ತಾಯಿ ಅಳುತ್ತ ಒಂದು ಸ್ಟೋವ್ ೩-೪ ಪಾತ್ರೆ ಚರಿಗೆ ವಾಟೆ ಕಟ್ಟಿ, ಒಂದು ಕಂಬಳಿ ಚದ್ದರ ಸುತ್ತಿಕೊಟ್ಟು, ಅಳುತ್ತಾ ಕಳಿಸಿದಳು. ಬೊಮ್ಮನಹಳ್ಳಿಯ ಜನರು ಕುದುರೆ ಕಟ್ಟುವ ಕೋಣೆಯನ್ನು ವಸತಿಗೆ ಕೊಟ್ಟಿದ್ದರು. ಅಡಿಗೆ ಮಾಡಿಕೊಳ್ಳಲಿಕ್ಕೆ ಬರುತ್ತಿರಲಿಲ್ಲ. ಹೇಗೆ ಮಾಡಿದೆನೋ ಹೇಗೆ ಉಂಡೆನೋ ತಿಳಿಯದು. ಕಣ್ಣು ಮಾತ್ರ ಕೆಂಪಾಗಿರುತ್ತಿದ್ದವು. ಊರ ಸುತ್ತಲೂ ಒಂಬತ್ತು ಸಿಂಧಿಯ ಗುಡಿಸಲುಗಳಲ್ಲಿ ಹೆಂಡ ಮಾರುತ್ತಿದ್ದರು. ಅಲ್ಲಿ ಕುಳಿತು ಕುಡಿಯುವ ಗಂಡು ಹೆಣ್ಣುಗಳನ್ನು ನೋಡಿ ಹೆದರಿ ಸಂಜೆಯ ಮುಂದೆ ಮಾಳಿಗೆ ಹತ್ತಿ ಕುಳಿತು ನಮ್ಮೂರ ಕಡೆ ನೋಡಿ ಅಳುತ್ತಿದ್ದೆ.

ಎರಡು ತಿಂಗಳಾದೊಡನೆ ಧಾರವಾಡ ಜಿಲ್ಲೆಗೆ ಶಿಕ್ಷಕ ಸ್ಥಾನಕ್ಕೆ ಸಂದರ್ಶನ ಬಂದಿತು. ನಮ್ಮ ತಂದೆ ಸಂದರ್ಶನ ಪತ್ರವನ್ನು ತೆಗೆದುಕೊಂಡು, ರಾಯಚೂರ ಮೇಲಿಂದ ದೇವದುರ್ಗಕ್ಕೆ ಬಸ್ಸಿಗೆ ಬಂದು, ಅಲ್ಲಿಂದ ಹಳ್ಳಕೊಳ್ಳ ತಡಹಾಯ್ದು ನಡೆಯುತ್ತ ಬೊಮ್ಮನಳ್ಳಿಗೆ ಬಂದು ಮುಟ್ಟಿದರು. ಊರವರಿಗೆ ಖರೆ ಸುದ್ದಿ ಹೇಳದೆ ಅಣ್ಣಿಗೇರಿಗೆ ಬಂದು ಸಂದರ್ಶನ ಕೊಟ್ಟು ಮರಳಿದೆ. ಮತ್ತೆ ಮೂರು ತಿಂಗಳು ಕಳೆದ ಮೇಲೆ ನಮ್ಮ ಜಿಲ್ಲೆಯ ಮುಂಡರಗಿ ತಾಲೂಕಿನ ಶೀರನಹಳ್ಳಿಗೆ ಶಿಕ್ಷಕನೆಂದು ಹುಕುಂ ಬಂದಿತು. ಮತ್ತೆ ನನ್ನ ತಂದೆ ಮುಚ್ಚಿಕೊಂಡು ಬಂದು ಆರ್ಡರ್ ಮುಟ್ಟಿಸಿದರು. ಈ ಸಲ ಊರವರಿಗೆ ನಮ್ಮ ತಾಯಿಗೆ ಹುಷಾರಿಲ್ಲವೆಂದು ಸುಳ್ಳು ಹೇಳಿ ಕೈಯಲ್ಲೊಂದು ಕೈಚೀಲ ಹಿಡಿದುಕೊಂಡು ಅಡಿಗೆ ಸಾಮಾನು, ಹಾಸಿಗೆ, ಎಲ್ಲಾ ಖೋಣೆಯಲ್ಲಿಯೇ ಬಿಟ್ಟು, ಕೀಲಿ ಹಾಕಿ ಶೀರನಹಳ್ಳಿಗೆ ಬಂದು ಹಾಜರಾದೆ. ಮರುದಿನ ರಜಿಸ್ಟರ್ ಅಂಚೆ ಮೂಲಕ ರಾಜಿನಾಮೆ ಕಳಿಸಿದೆ. ಆಗ ನಮ್ಮ ತಂದೆ ತಾಯಿಗಳಿಗೆ ಹಿಡಿಸದಷ್ಟು ಸಂತೋಷವಾಯಿತು. ಪಾರಕ್ಯೊಮ್ಮೆ ಮಗನ ಮುಖ ನೋಡ್ತೇವೆ ಅಂತಾ ಹಿಗ್ಗಿದರು.

ಹೀಗೆ ಹಳ್ಳಿಗಳಲ್ಲಿ ಶಿಕ್ಷಕನಾಗಿ ದುಡಿಯುತ್ತ ಮಾನಪ್ಪನವರ ಸಾಲ ತೀರಿಸಿದೆ. ಒತ್ತಿ ಹಾಕಿದ್ದ ಹೊಲ ಬಿಡಿಸಿಕೊಂಡೆ. ನಮ್ಮ ಅಣ್ಣನ ಮಗಳ ಮದುವೆ ಮಾಡಿದೆ. ತಂದೆ ತಾಯಿಗಳನ್ನು ಜೋಪಾನ ಮಾಡುತ್ತ ಬಂದೆ. ಅಂದಿನ ಪಗಾರ ಕಡಿಮೆ. ೨೫ ರೂ.ಗೆ ಒಂದು ಚೀಲ ಬಿಳಿಜೋಳ ಸಿಕ್ಕುತ್ತಿತ್ತು. ಬಹಳ ಸುಖದಲ್ಲಿ ಇಡದಿದ್ದರೂ ತೃಪ್ತಿಯಿಂದ ಇರುವಷ್ಟು ನೋಡಿಕೊಂಡೆ. ನೌಕರಿ ಬಂದು ಹತ್ತು ವರ್ಷದ ಮೇಲೆ ಅವರ ಭಾವಚಿತ್ರವಿರಲೆಂದು ಗಜೇಂದ್ರಗಡಾಕ್ಕೆ ಕರೆದುಕೊಡು ಹೋದೆ. ನಮ್ಮ ತಂದೆಗೆ ಕೋಟು ತೊಡಿಸಿ ಫೋಟೋ ಹೊಡಿಸಿದೆ. ತಾಯಿಗೆ ಒಂದು ರೇಶ್ಮೆ ಸೀರೆ ಉಡಿಸಿ ಕೊರಳಲ್ಲಿ ಬಂಗಾರದ ಸರ ಹಾಕಿಸಿ ಫೋಟೋ ತೆಗೆಸಿದೆ. ಇಂದು ಅವೇ ಭಾವಚಿತ್ರಗಳು ನನ್ನ ಕೋಣೆಯಲ್ಲಿ ನನ್ನ ಕಣ್ಣೆದುರಿಗೆ

ಇವೆ. ಮಲಗುವಾಗ, ಎಚ್ಚರಾದಾಗ ಮೊದಲು ನನ್ನ ಕಣ್ಣಿಗೆ ಬೀಳುವವರು ನನ್ನ ಹೆತ್ತವರೇ. ನಮ್ಮ ಧರ್ಮದಲ್ಲಿ ಭಾವಚಿತ್ರ ಇಡುವದಿಲ್ಲ. ಆದರೆ ನಾನು ಇಡಬೇಕೆನ್ನುತ್ತೇನೆ. ಕೆಲವಂದು ಪೀಳಿಗೆಗೆ ಪರಿಚಯ ಬೇಕೇ ಬೇಕು.

ಅಂದು ನಮ್ಮ ತಂದೆ ತಾಯಿಗಳು ಎಸ್.ಎಸ್.ಸಿ., ಟಿ.ಸಿ.ಎಚ್. ಕಲಿಸಿದ್ದೇ ದೊಡ್ಡದು. ಮುಂದೆ ನಾನು ಬಾಹ್ಯವಾಗಿ ಪಿ.ಯು.ಸಿ.ಯಿಂದ ಎಂ.ಎ., ಬಿ.ಎಡ್. ವರೆಗೆ ಕಲಿತೆ. ೧೩ ಕವನ ಸಂಕಲನ, ನಾಟಕ, ಹಾಸ್ಯಪ್ರಬಂಧ, ಮಕ್ಕಳ ಕೃತಿ —ಹೀಗೆ ೩೦ ಕೃತಿ ರಚಿಸಿ ಕೈ ಸುಟ್ಟುಕೊಂಡು ಮಾಸಿಕೊಳ್ಳುತ್ತಿದ್ದೇನೆ. 'ತಾಯಿಯ ಪಾದದಲ್ಲಿ ಸ್ವರ್ಗವಿದೆ. ತಂದೆ ಸ್ವರ್ಗದ ಬಾಗಿಲು' ಎಂದು ಪ್ರವಾದಿಯವರು ಹೇಳಿದಂತೆ ನಂಬಿಕೊಂಡಿದ್ದೇನೆ. ಹೆತ್ತವರನ್ನು ಮರೆತವರು ಮನುಷ್ಯರೆ?

● ● ಎಂ. ಡಿ. ಗೋಗೇರಿ : ನವಅಯೋಧ್ಯಾನಗರ, ಹುಬ್ಬಳ್ಳಿ - ೫೮೦ ೦೨೪

## ಆರು ಭೌತಿಕವಾದಿ ಕವನಗಳು

ಶಂಕರ ತಲ್ಲೂರ

### ೧. ಮಧುಮೇಹ

ಮಧುಮೇಹವೆ, ನೀನು ನನಗೆ ಮಾಡಿರುವ ಕೆಡಕು
ಗಳಿಗಿಂತ ಇರುವದು ಉದ್ದ ಒಳಿತುಗಳ ಪಟ್ಟಿ
ಅಲ್ಲ ನೀ ಜಡ್ಡು, ನನ್ನ ಕಣ್ಗಾವಲ ಜಟ್ಟಿ
ನಡುವೆ ಜೊತೆಗೂಡಿದರು ಇರುವೆ ಕೊನೆವರೆಗು
ಜೀವನದಿ ಹರಡಿರುವಿ ಶಿಸ್ತು ಸಂಯಮ ಗಂಧ
ಸಂಜೆ ಮುಂಜಾವಿನಲಿ ಬಿಡದೆ ವಾಯು ವಿಹಾರ
ಗೊತ್ತುಪಡಿಸಿದ ವೇಳೆ ಸಂತುಲಿತ ಆಹಾರ
ನೋವಿನಲ್ಲೂ ನಲಿವಿನ ಸುಮಧುರ ಸಂಬಂಧ
ದಾಟಿರುವೆ ತರತರದ ಕೆಟ್ಟ ಚಟಗಳ ಜಾಲ
ಇನ್ಸುಲಿನ್ನಿನ ಕೊರತೆ ಅದು ಇದ್ದರೂ ಸಹಿತ
ಸಮತೂಕದೂಟ, ತಿರುಗಾಟ, ಅವುಷಧದಿಂದ
ಕಾಯ್ದುಕೊಂಡಿದ್ದೇನೆ ಸಕ್ಕರೆಯ ಸಮತೋಲ
ಮಧುಮೇಹ ಮಹರಾಯ ಶಿಸ್ತು ಕಲಿಸುವ ಮಲ್ಲ
ಭಯದ ಬೀಜವ ಬಿತ್ತಿ ಸುಗಮಗೊಳಿಸಿದೆ ಎಲ್ಲ.

### ೨. ಮೋತಿಬಿಂದು

ಮಧುಮೇಹ, ರಕ್ತದೊತ್ತಡ ಜುಗಲಬಂದಿ ದೇ–
ಹದಿ ಮಾಡಿ ಮಾಡಿ ದಾಳಿ, ಆಗಿಹುದು ಬೇಗನೆ ಹಣ್ಣು
ಮೋತಿಬಿಂದು: ಮಸಕಾಗಿ ಕಾಣ್ತದೆ ಎಡಗಣ್ಣು
ಹಳೆ ಪೊರೆ ಕಳಚಿ ಕಸಿಗೊಳಿಸಿಹರು ಹೊಸ ಪರದೆ

ಮೂರುವಾರ ದೂರದರ್ಶನಕೆ ಹೇಳ್ಳಿ ವಿದಾಯ
ಶರಣಾಗಿರುವೆನು ನಾನು ಆಕಾಶವಾಣಿಗೆ
ಹಾಗು ಮಗ್ಗಲು ಕುಳಿತು ಹೇಳ್ವ ಮಡದಿ ಮಾತಿಗೆ
ಧಾರಾಳ ಪಡೆದಿರುವೆ ಮನೆ ಮಂದಿಯ ಸಹಾಯ
ದೇಹವೇ ದೇಗುಲ ಇಹಲೋಕವೆ ಕೈಲಾಸ
ಗಟ್ಟಿಗೊಳಿಸಿಕೊಳ್ಳಬೇಕು ನಶಿಸುತ್ತಿರುವ
ಈ ದೇಹದ ಒಂದೊಂದೆ ಅಂಗ ಮಾಡಿಕೊಳುತ
ಕಾಯಕಲ್ಪ: ಸಹ್ಯಸುಂದರವಾಗಬೇಕು ಇಹವಾಸ
ಅಲ್ಲವಾದರು ನಮ್ಮ ದೇಹವು ಅಜರಾಮರ
ಸ್ವಸುಖ, ಪರಹಿತಕಿರಲಿ ಹೋರಾಟ ನಿರಂತರ.

೩. ಹೊನ್ನ ಕಳಸ

ದೇಹ ಜೀವಂತಿಕೆಯ ಕುರುಹುಗಳು ಅಪರಿಮಿತ
ಶುದ್ಧೀಕರಿಸಲು ರಕ್ತವ ಎದೆಯ ಒಳಹೊರಗೆ
ಲಾಳಿ ಹಾಕುವ ಗಾಳಿ, ದೇಹದ ಅಂಗಗಳಿಗೆ
ರಕ್ತ ಪೂರೈಸಲು 'ಲಬಡಬ' ಹೃದಯದ ಬಡಿತ
ತಿಳಿಯದೊಲು ಒಳಗೊಳಗೆ ಜೀರ್ಣಾಂಗಗಳ ದುಡಿತ
ಬಾಯ್ಮಾತು, ಕೈಕಾಲು ದೇಹದ ಚಲನವಲನ
ತೀಕ್ಷ್ಣ ಬೆಳಕಿಗೆ ಕಣ್ಣ ಗುಡ್ಡಿಗಳ ಸ್ಪಂದನ
ಇವೆಲ್ಲದರ ಮೇಲೆ ಇರುವದು ಮಿದುಳಿನ ಹಿಡಿತ
ದೇಹ ದೇಗುಲದ ಹೊನ್ನ ಕಳಸ ಶಿರವು ಜಾಣ
ಕಣ್ಣು, ಕಿವಿ, ಮೂಗು, ನಾಲ್ಗೆ, ತ್ವಚೆ ಪಂಚೇಂದ್ರಿಯ
ಗಳು: ಮಿದುಳು ಇವುಗಳನೆಲ್ಲ ಆಡಿಸುವ ಒಡೆಯ
ಅದು ದುಡಿವ ವರೆಗೆ ಸಿಗದು ಸಾವಿಗೂ ಪ್ರಮಾಣ
ಮಿದುಳೆ ಜೀವವು, ಅಂತರಾತ್ಮವು ಮಿಡಿವ ಮನಸು
ಉಳಿಸುವದು ನೆನಪು, ಮಾಡಿ ಕಂಡ ಕನಸ ನನಸು.

೪. ಪುನರ್ಜನ್ಮ

ಹುಟ್ಟಿ ಸತ್ತವರುಂಟು ಎಲ್ಲ, ಸತ್ತು ಹುಟ್ಟಿದ
ಬಗೆಗೆ ಇಲ್ಲಾವ ಪುರಾವೆ: ಅದು ಮೋಸದ ಕಥೆ
ರಂಜನೆಗೆ, ಶೋಷಣೆಗೆ ಸುಳ್ಳು ಸುಳ್ಳೆ ಕಟ್ಟಿದ
ದಂತ ಕಥೆಯಲಿ ಬರುವದು ಪುನರ್ಜನ್ಮಗಾಥೆ
ಹುಟ್ಟು ಸಾವಿನ ನಡುವೆ ಇಹದ ರೋಚಕ ಬಾಳ
ಏಳು ಬೀಳಿನ ನಡುವೆ ಹಾಳುಗೆಡುವದೆ ಸಾರ್ಥಕ

ಗೊಳಿಸುವ ಪರಿಯನರಿಯಬೇಕು ಮರೆತೆಲ್ಲ ಗೋಳ
ಬೇಕೇಕೆ ಸಾವ ನಂತರದ ಕಲ್ಪನೆ ಲೋಕ?
ಯಾವ ನೀತಿ ಬೋಧನೆಗೆ ಯಾವ ಸಾಧನೆಗೆ
ಸಾಗಿ ಬಂದಿದೆ ಪುನರ್ಜನ್ಮ ಪ್ರತಿಪಾದನೆ?
ಇರುವೊಂದೆ ಜನ್ಮದಿ ಮರುಜನ್ಮವಿದ್ದಂತೆ
ದ್ವೇಷ ತೊರೆದು ಪ್ರೇಮ ಹರಡುವ ಪರಿವರ್ತನೆ!
ಸತ್ತು ಹೋಗುವ ದೇಹ ಮತ್ತೆ ಬಾರದು ಜಗಕೆ
ಇರುವಾಗಲೆ ಅರ್ಪಿಸಿ ಮರೆಯದಂಥ ಕಾಣಿಕೆ.

### ೫. ಜನತಾ ಜನಾರ್ದನ

ಜಪಿಸಲು ದೇವರ ಅದೆಂತು ಹೊರುವನು ನಮ್ಮಯ
ಭಾರ? ತೊಂದರೆಗಳಿಗೆ ಹೇಗೆ ನೀಡುವನು ಪರಿ
ಹಾರ? ಏನುಪಯೋಗ ದೀನ ಭಾವದಿ ಬರಿ
ದೇವರ ಮೊರೆಯ ಹೊಕ್ಕರೆ ಕುಬ್ಜಗೊಳಿಸಿ ಕಾಯ?
ಬೇಡೆಮಗೆ ದುಡಿಯದಲೆ ಪಡೆಯುವ ಸ್ವರ್ಗಸುಖ
ಮಂತ್ರ ಮಾಟಗಳು ವ್ಯರ್ಥ ಶಕ್ತಿಯ ಹ್ರಾಸ
ಕಾಯವಿದು ಸರ್ವಸ್ವ, ಕಾಯಕವೆ ಕೈಲಾಸ
ಸ್ವರ್ಗದ ಆಶೆ ಮಾಡದಿರಲಿ ಜೀವನ ವಿಮುಖ
ಮಾಡಬೇಡಿ ಸಲ್ಲದ ಕೆಲಸ, ನೋಯಿಸಬೇಡಿ
ಅನ್ಯರ ಮನಸ, ಮೆಚ್ಚಲಿ ನಮ್ಮ ಸುತ್ತಲ ಜನ
ನೆನಪಿರಲಿ ಜನತೆಯೆ ನಮಗೆ ನಿಜದ ಜನಾರ್ದನ
ಬರುವರು ನೆರವಿಗೆ ನೆರೆ ಹೊರೆ ಜನ ಸುಖದುಃಖದಿ
ತಿಳಿವು ಬೆಳೆದು ಒಳ್ಳೆತನವೆ ಆಗಲಿ ದೇವರು
ಘನತೆ ಪಡೆಯಲಿ ಅನವರತ ದುಡಿವವರ ಬೆವರು.

### ೬. ಭಕ್ತಿ (ಒಂದು ಮುಸಲಸಲ್ ಗಜಲ್)

ಮನುಷ್ಯನ ಕಲ್ಪನೆಯಲ್ಲಿ ದೇವರ ಸೃಷ್ಟಿಯಾಗಿದೆ
ಬರಿ ನಂಬುಗೆಯ ಮೇಲೆಯೆ ಭಕ್ತಿಯ ವೃಷ್ಟಿಯಾಗಿದೆ
ಜ್ಞಾನ, ತರ್ಕದ ಬಲವಿಲ್ಲದ ಮುಗ್ಧ ಜೀವಿಗಳಿಗೆ
ಸುಲಭದ ಭಕ್ತಿಯ ನಶೆಯಿಂದ ಸಂತುಷ್ಟಿಯಾಗಿದೆ
ಇರದೆ ರಂಜನೆಯ ಅನ್ಯ ಸಾಧನ ದೇವರ ಕೊಡುಗೆಯೆಂದು
ಮಕ್ಕಳ ಹೆರುವದೆ ಹಲವರ ಜೀವನ ದೃಷ್ಟಿಯಾಗಿದೆ
ಭಕ್ತಿಯ ಜೊತೆ ದಕ್ಷಿಣೆ ಬೇಡುವ ಪೂಜಾರಿಯಿಂದಲೆ
ಭಕ್ತರ ಮನ, ಧನ ಲೂಟಿಯಾಗುವದು ಪುಷ್ಟಿಯಾಗಿದೆ
ಕೈಯೊಳಗಿಂದ ನುಸುಳುವ ಭಕ್ತರ ಕಟ್ಟಿ ಹಾಕಲು
ನೂರೆಂಟು ಮಂತ್ರ, ತಂತ್ರಗಳ ಬಿಗಿ ಮುಷ್ಟಿಯಾಗಿದೆ.

● ● ಶಂಕರ ತಲ್ಲೂರ : ೧೭೨, ಓಂದವಾಡಿ, ಬೆಳಗಾವಿ - ೫೯೦ ೦೦೧

# ಅಪರೂಪದ ನಾಟಕಕಾರ ಭಾಸ

ಎಸ್. ಎಸ್. ಹಿರೇಮಠ

ಸಂಸ್ಕೃತದ ಪ್ರಖ್ಯಾತ ನಾಟಕಕಾರರಲ್ಲಿ ಭಾಸನನ್ನು ಪರಂಪರೆ ಗೌರವದಿಂದ ಸ್ಮರಿಸುತ್ತ ಬಂದಿದೆ. ಹೆಚ್ಚಿನ ಲೇಖಕರಂತೆ ಈತನ ಬಗೆಗೂ ಚಾರಿತ್ರಿಕವೆಂಬಂಥ ಸಂಗತಿಗಳು ದೊರಕುವುದಿಲ್ಲ. ಕ್ರಿ. ಶ. ಸುಮಾರು ೩೦೦ ರಲ್ಲಿದ್ದ ದಾಕ್ಷಿಣಾತ್ಯ ಈತ ಎಂದು ಮಾತ್ರ ತಿಳಿದುಬಂದಿದೆ. ಈತನ ೧೪ ನಾಟಕಗಳು ದೊರಕಿವೆ. ಕಾಳಿದಾಸ, ಭವಭೂತಿಯರಿಗಿಂತ ಹಲವಾರು ಕಾರಣಗಳಿಗಾಗಿ 'ಭಾಸ' ಗಮನಾರ್ಹನಾಗುತ್ತಾನೆ. ಅವರಿಗಿಂತ ಹೆಚ್ಚು ರಾಜಕೀಯ ಪ್ರಜ್ಞೆ ಇರುವ ಈತನ ಕೃತಿಗಳಲ್ಲಿ ಕಂಡುಬರುವ ಜನಪರ ದನಿಗಳು ವಿಶೇಷ ಉಲ್ಲೇಖನೀಯ ವಾಗಿವೆ. ಪ್ರಭುತ್ವದ ಪರವಾದ ನಿಲುವುಗಳಿದ್ದರೂ ಕೂಡ, ಅರಮನೆಯ ಬದುಕಿನ ವೈರುದ್ಧ್ಯಗಳನ್ನು, ಅಪಮೌಲ್ಯಗಳನ್ನು, ಒಳರಾಜಕೀಯದ ಹುನ್ನಾರಗಳನ್ನು ಕೆಲವು ಪಾತ್ರಗಳ ಮೂಲಕ ವಿಡಂಬಿಸಿ ಕಾಣಿಸಿದ್ದು ಕುತೂಹಲದ ಅಂಶವಾಗಿದೆ. ಇನ್ನೊಂದೆಡೆ ಶ್ರಮಿಕರಲ್ಲಿದ್ದ ಸುಂದರವಾದುದನ್ನು, ಉತ್ತಮವಾದುದನ್ನು ಪ್ರೀತಿಸುವ ತನ್ನ ನಿಲುವನ್ನು ತೋರ್ಪಡಿಸುತ್ತಾನೆ. ಆಧುನಿಕರಾದ ನಮಗೆ ಆಶ್ಚರ್ಯವೆನಿಸುವ ಮಟ್ಟಿಗೆ ಅವನ 'ವಾಸ್ತವ ಪ್ರಜ್ಞೆ' ಪ್ರಖರವಾಗಿದೆ. ತನ್ನ ಕಾಲದ ಬದುಕಿನ ಸತ್ಯಗಳಿಗೆ ಪ್ರಾಮಾಣಿಕ ಸ್ಪಂದನೆ ನೀಡುವ, ಅವುಗಳಿಗೆ ನಿಷ್ಠನಾಗುಳಿಯುವ ಭಾಸನಂಥ ನಾಟಕಕಾರರು ತೀರ ಅಪರೂಪ.

ಸಂಸ್ಕೃತ ನಾಟಕ ಸಾಹಿತ್ಯದಲ್ಲೇ ವಿಶಿಷ್ಟ ಕೃತಿಯೆಂದು ಹೆಸರು ಮಾಡಿರುವ ಶೂದ್ರಕನ 'ಮೃಚ್ಛಕಟಿಕ'ಕ್ಕೆ ಆಕರವೆನ್ನಬಹುದಾದ 'ಚಾರುದತ್ತ' ಭಾಸನ ನಾಲ್ಕು ಅಂಕಗಳ ಕೃತಿ. ಆಳುವ ವರ್ಗವನ್ನು ವಿಚಿತ್ರವಾಗಿ ತಮಾಷೆ ಮಾಡುವ 'ಮೃಚ್ಛಕಟಿಕ' ಶ್ರಮಿಕ ವರ್ಗದ ಮೌಲಿಕಾಂಶ ಗಳನ್ನು ಎತ್ತಿ ಹಿಡಿಯುತ್ತದೆ. ರಾಮಾಯಣದ ಆಧಾರದಲ್ಲಿ ಭಾಸ ಬರೆದ ಮೂರು ನಾಟಕಗಳಲ್ಲಿ 'ಯಜ್ಞಫಲ' ಒಂದು. ರಾಮ ಮತ್ತವನ ಸೋದರರು ಚಿಕ್ಕವರಿದ್ದಾಗಿನ ಘಟನೆಗಳನ್ನು ಈ ನಾಟಕ ಒಳಗೊಂಡಿದೆ. ರಾಜಗುರು ವಿಶ್ವಾಮಿತ್ರ ೧೦ ದಿನಗಳ ಯಜ್ಞ ಮಾಡಲು ನಿರ್ಧರಿ ಸುತ್ತಾನೆ. ಆ ಸಂದರ್ಭದಲ್ಲಿ ಆಗುತ್ತಿದ್ದ ರಾಕ್ಷಸರ ಹಾವಳಿಯನ್ನು ತಡೆಯಲು ಅವನು ರಾಮ ಲಕ್ಷ್ಮಣರನ್ನು ಕರೆತರುತ್ತಾನೆ. ಯಜ್ಞವನ್ನು ಯಶಸ್ವಿಯಾಗಿ ಮುಗಿಸಿ ರಾಜಪುತ್ರರಿಗೆ ಗ್ರಾಮೀಣ ಬದುಕಿನ ಪರಿಚಯ ಮಾಡಿಕೊಡುತ್ತ ಅವರನ್ನು ಮತ್ತೆ ಅರಮನೆಗೆ ಕರೆತರುತ್ತಾನೆ.

ಈ ನಾಟಕದಲ್ಲಿ ಮೊದಲನೆಯ ಅಂಕದಲ್ಲಿ ಕಾಣುವ ವಿಶೇಷಾಂಶಗಳನ್ನು ಕುರಿತು ಈಗ ನೋಡುವಾ : ಮೊದಲು ಸೂತ್ರಧಾರ ರಾಮನನ್ನು ಸ್ತುತಿಸುತ್ತಾನೆ. ದಶರಥನ ಮಂತ್ರಿ ಸುಮಂತ್ರ, ಚಕ್ರವರ್ತಿಯ ಪುತ್ರಜನ್ಮೋತ್ಸವದಲ್ಲಿ ದಾನ ಸತ್ಕಾರಗಳಿಂದ ಪೌರರನ್ನು ತೃಪ್ತಿಪಡಿಸಿದ್ದನ್ನು ಹೇಳುವ ಸಂದರ್ಭದಲ್ಲಿ ಹಳ್ಳಿಯವರ ಬಯಕೆಯೂ ಈಡೇರಲಿ ಎಂದು ಕಂಚುಕಿ ಹೇಳುತ್ತಾನೆ. ಈ ನಾಟಕದಲ್ಲಿ 'ಹಳ್ಳಿ ಜನರ' ಬಗ್ಗೆ ಬರುವ ಮೊದಲ ಉಲ್ಲೇಖವಿದು. ನಂತರ ಬ್ರಾಹ್ಮಣ ವಿದೂಷಕನ ಮೂಲಕ ಲೇಖಕ ಮೇಲ್ವರ್ಗಗಳನ್ನು ವಿಡಂಬಿಸುವುದು ಗಮನಾರ್ಹವಾಗಿದೆ.

'ನನ್ನಂಥ ಬ್ರಾಹ್ಮಣನು ಭೋಜನದಿಂದ ತೃಪ್ತನಾಗಿರುವಾಗ ಯಜ್ಞವು ಸಫಲವಾಗದೇ ಇದ್ದೀತೇ ?' ಎಂದು ವಿದೂಷಕ ಹೇಳಿದರೆ ಮಂತ್ರಿ ಸುವರ್ಣನಾಣ್ಯ ದಕ್ಷಿಣೆ ಸಿಕ್ಕಿತೇ ಎಂದು ಕೇಳುತ್ತಾನೆ. ವಿದೂಷಕ, 'ಚಿನ್ನವು ನನಗೆ ಪ್ರಿಯವಾಗುವುದಕ್ಕೆ ನಾನೇನು ರಾಜನೇ ಅಥವಾ ವರ್ತಕನೇ?' ಎಂದು ಮೇಲ್ವರ್ಗವನ್ನು ವಿಡಂಬಿಸಿ ಸುಮ್ಮನಾಗದೇ ಬ್ರಾಹ್ಮಣರನ್ನೂ ತಮಾಷೆ ಮಾಡುತ್ತಾನೆ. ಕಂಚುಕಿ, '೧೦,೦೦೦ ಶತ್ರುಗಳನ್ನು ಯಾರು ಜಯಿಸುವರೋ ಅವರು ಮಹಾರಥರಾಗುತ್ತಾರೆ.' ಎಂದುದಕ್ಕೆ ವಿದೂಷಕ, 'ಹಾಗಾದರೆ ನಾನೂ ದಶಸಹಸ್ರ ಮೋದಕಮಾರಕನಾದ ಮಹಾರಥ' ಎನ್ನುತ್ತಾನೆ. ಕಂಚುಕಿ, ಒಂದೇ ದಿನ ೧೦,೦೦೦ ಮೋದಕಗಳನ್ನು ಯಾವನೂ ತಿನ್ನಲಾರ ಎಂದಾಗ ವಿದೂಷಕ, ಒಂದೇ ದಿನ ಯಾವ ಮಹಾರಥನೂ ೧೦,೦೦೦ ಶತ್ರುಗಳನ್ನು ಕೊಲ್ಲಲಾರ ಎನ್ನುತ್ತಾನೆ. ಇದಕ್ಕೆ ಕಂಚುಕಿ ಸಮಜಾಯಿಸಿ ಹೇಳುವುದು ಹೀಗೆ : ಕೊಲ್ಲುವುದು ಎಂದರೆ ಕೆಲವರು ಕೊಲೆಯಾಗುತ್ತಾರೆ, ಓಡಿಹೋಗುತ್ತಾರೆ, ಕೆಲವರು ಶರಣಾಗತರಾಗಿ ಗೆದ್ದವನಿಂದ ರಕ್ಷಣೆ ಪಡೆಯುತ್ತಾರೆ. ಆಗ ವಿದೂಷಕ, ನಾನೂ ಬಹಳಷ್ಟು ಮೋದಕಗಳನ್ನು ಹೊಡೆಯುತ್ತೇನೆ, ಬಹಳಷ್ಟನ್ನು ದಯೆಯಿಂದ ಉಳಿಸುತ್ತೇನೆ ಎನ್ನುತ್ತಾನೆ. ಆಗ ಮಂತ್ರಿ ಸುಮಂತ್ರ ಹೇಳುವುದು, 'ಬಾಭ್ರವ್ಯ, ಕಾರಣ ಕೊಟ್ಟು ವಿತಂಡವಾದಿಗಳನ್ನು ಶಮನಗೊಳಿಸಲಾಗುವುದಿಲ್ಲ.' ಮುಂದೆ ವಿತಂಡವಾದಿಗಳ ಪ್ರಸ್ತಾಪ ಮತ್ತೆ ಬರುವ ಸನ್ನಿವೇಶವನ್ನು ನೋಡಿದರೆ ವಿದೂಷಕ ಬ್ರಾಹ್ಮಣ, 'ಲೋಕಾಯತಿಕ' ನಿರಬೇಕೆನಿಸುತ್ತದೆ. ಮೇಲಿನ ಪ್ರಸಂಗದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರೂ ಶೋಷಕ ವರ್ಗವನ್ನು ನಯವಾಗಿ ಟೀಕಿಸುತ್ತಿರುವುದು ಸ್ಪಷ್ಟವಿದೆ. ಬ್ರಾಹ್ಮಣರ ಭೋಜನಪ್ರಿಯತೆ, ರಾಜರ ಬಿರುದುಗಳ ಜೊಳ್ಳುತನ, ವ್ಯಾಪಾರಿವರ್ಗದ ಆಶೆಬುರುಕತನಗಳನ್ನು ಇಲ್ಲಿ ತೋರಿಸುತ್ತಿದ್ದಾನೆ ಭಾಸ. ಇದು ಬರಿ ವಿಡಂಬನೆಗಾಗಿ ಬಂದ ಪ್ರಸಂಗವಲ್ಲ. ರಾಜಶಾಹಿಯಂಥ ಬಲಿಷ್ಠವಾದ ಆಳುವ ವರ್ಗವನ್ನು ನೇರವಾಗಿ ಟೀಕಿಸುವುದು ಲೇಖಕನಿಗೆ ಸಾಧ್ಯವಿಲ್ಲದಿರುವಾಗ ಅವನು ಅನುಸರಿಸುವ ತಂತ್ರ ಇಂಥವೇ. ಮೊದಲೇ ವಿದೂಷಕ, ಏನು ಹೇಳಿದರೂ ನಡೆಯುತ್ತದೆ. ಆದರೆ ಅದಕ್ಕೂ ಒಂದು ಮಿತಿ ಇದ್ದೇ ಇರುತ್ತದೆನ್ನಿ. ಅಂಥ ಮಿತಿಯಲ್ಲೇ ಲೇಖಕ ಸಾಗಬೇಕಲ್ಲ. ಐದನೇ ಅಂಕದಲ್ಲಿ ತಾಮ್ಯಾಯನ ರಾಜಶಾಹಿ, ಪುರೋಹಿತಶಾಹಿಯ ಕಟುವಾದ ಟೀಕೆ ಮಾಡುತ್ತಾನೆ. ಅಲ್ಲಿ ತಾಮ್ಯಾಯನನನ್ನು ನಾಸ್ತಿಕವಾದಿ ಎಂದು ಕರೆಯುತ್ತಾರೆ ಅವನ ಸ್ನೇಹಿತರು. ಅಂಥದೇ ಪಾತ್ರ ಬಾಭ್ರವ್ಯ. ಇಲ್ಲಿ ಇವನನ್ನು ವಿತಂಡವಾದಿ ಎಂದು ಶೋಷಕವರ್ಗಪರ ವ್ಯಕ್ತಿ ಹೇಳುತ್ತಾನೆ. ಆದರೆ ತಾಮ್ಯಾಯನ, ಬಾಭ್ರವ್ಯರ ತರ್ಕಗಳು, ಪ್ರಶ್ನೆಗಳು ಆಗಿನ ಆಳುವ ವರ್ಗದ ಕುತಂತ್ರ, ಕುಹಕ, ಮೋಸಗಳನ್ನೇ ಸೂಚ್ಯವಾಗಿ ಹಿಡಿಯುತ್ತವೆ.

ಸುಮಂತ್ರ ದಶರಥನನ್ನು ಹೊಗಳುವುದು ಹೀಗೆ : ಮುಪ್ಪಿನಲ್ಲೂ ಮನೋಹರನಾದ ದಶರಥ ಜನರ ಅಳಲನ್ನು ನೀಗುವನು. ಪ್ರಜೆಗಳೂ, ವೈರಿಗಳೂ ಇವನ ಹೆಸರನ್ನು ಕೇಳಿಯೇ ತಮ್ಮ ಪಾಪವನ್ನು ಕಳೆದುಕೊಳ್ಳುತ್ತಾರೆ. ರಾಜ ಆತ್ಮರತಿಗೆ ತೊಡಗಿಕೊಳ್ಳುವುದೂ ಹೀಗೆ : ನನ್ನ ಪುಣ್ಯದ ಫಲದಿಂದ ದೈವವು ನನಗೆ ಅನುಕೂಲವಿರುವುದರಿಂದ ಮಳೆ ಬೆಳೆ ಚೆನ್ನಾಗಿ

ಆಗುತ್ತವೆ, ಜನರು ಧರ್ಮ ಮತ್ತು ಸಂಪತ್ತುಗಳಿಂದ ಕೂಡಿದ್ದಾರೆ, ಅವರಿಗೆ ರೋಗ ಮರಣಗಳಿಲ್ಲ.

ರಾಜ ತನ್ನ ಬದುಕು ಸಾರ್ಥಕವಾಗಲು ಬ್ರಾಹ್ಮಣ, ದೇವತೆ, ಪಿತೃ ಮತ್ತು ಶರಣಾಗತರನ್ನು ವಿಧಿವತ್ತಾಗಿ ಪೂಜಿಸಿ, ಅನೇಕ ಯಜ್ಞಗಳನ್ನು ಮಾಡಿ, ವೈರಿಗಳನ್ನು ಕೊಂದು, ವೇದ ಓದಿ, ಕುಲವ್ರತವನ್ನು ಸಾಧಿಸಿದುದೇ ಕಾರಣವೆಂದು ತಿಳಿಯುತ್ತಾನೆ. ರಾಜ ಮತ್ತು ಮಂತ್ರಿಗಳ ಮಧ್ಯೆ ಸ್ತುತಿಪರ ಸಂಭಾಷಣೆಯೆ ಮುಂದುವರಿಯುತ್ತದೆ. ಸೂರ್ಯನು ಬೆಳಗುತ್ತಿರುವಾಗ ಕತ್ತಲೆ ಬರದಿರುವಂತೆ, ರಾಜಸಿಂಹನಾದ ನೀನು ಇರಲು ಜನರಲ್ಲಿ ಕುಮತಿ ಹುಟ್ಟದು ಎಂದು ಸುಮಂತ್ರ ಮುಖಸ್ತುತಿ ಮಾಡುತ್ತಾನೆ. ಮಕ್ಕಳನ್ನು ಪಡೆದು ಪಿತೃಋಣ ತೀರಿಸಬೇಕೆಂಬ ಮಾತು ಬರುತ್ತದೆ ಇಲ್ಲಿ. ಇವನ ರಾಜ್ಯದಲ್ಲಿ ಕಳ್ಳತನ ಮುಂತಾದ ದುಷ್ಟ ಕಾರ್ಯಗಳೇ ಇಲ್ಲದ್ದರಿಂದ, ಸೆರೆಯಿಂದ ಬಿಡಿಸಲು ಕೈದಿಗಳೇ ಇರಲಿಲ್ಲ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ ಸುಮಂತ್ರ. ದಶರಥನನ್ನು ಸೂರ್ಯ, ರಾಜಸಿಂಹ ಎಂದು ಸುಮಂತ್ರ ಹೇಳುವುದು ಸರ್ವಾಧಿಕಾರಿಯ ವ್ಯಕ್ತಿಪೂಜೆಯಲ್ಲದೇ ಇನ್ನೇನು ? ತನ್ನ ಮಕ್ಕಳಿಗೆ ರಾಜಧರ್ಮ, ವಿನಯ, ಜನರನ್ನು ಪೊರೆವ ಉಪಾಯ, ವೈರಿಗಳನ್ನು ಗೆಲ್ಲುವ ಸಾಮರ್ಥ್ಯಗಳನ್ನು ಕಲಿಸುವ, 'ಋಣ', 'ಧರ್ಮ'ಕಾರ್ಯ ಇನ್ನೂ ಉಳಿದಿದೆ ಎಂದು ದಶರಥ ಭಾವಿಸುತ್ತಾನೆ. ಈ ಕಲಿಕೆ ಸ್ವರೂಪವನ್ನು ಮುಂದಿನ ಒಂದು ಭಾಗದಲ್ಲಿ ನೋಡುತ್ತೇವೆ. ಅಲ್ಲಿ ಶೋಷಿತ ವರ್ಗಹಿತವನ್ನು ರಕ್ಷಿಸುತ್ತಿರುವ ವಿಶ್ವಾಮಿತ್ರ ಮುನಿ, ಶೋಷಕ ಅರಸರನ್ನು ಪಳಗಿಸುವ ತಂತ್ರ ಸ್ವಾರಸ್ಯಕರವಾಗಿದೆ. ಅಲ್ಲಿ ಭಾಸ ಎಗ್ಗಿಲ್ಲದೇ ಸತ್ಯಗಳನ್ನು ಬಿಚ್ಚಿಡುತ್ತಾನೆ. ಆದರೆ ಈ ಬಗೆಯ ಕಲಿಕೆಯನ್ನೇ ದಶರಥ 'ಧರ್ಮ', 'ಋಣ' ಎಂದು ಭಾವಿಸುತ್ತಾನೆ. ಒಟ್ಟಾರೆ ಭಾಸ ಆಳುವ ವರ್ಗ ಮತ್ತು ದುಡಿಯುವ ವರ್ಗಗಳ ನಡುವಿನ ವಿಚಾರಗಳ ದ್ವಂದ್ವವನ್ನು, ವೈರುದ್ಧ್ಯವನ್ನು ಈ ನಾಟಕದಲ್ಲಿ ಚೆನ್ನಾಗಿ ಗುರುತಿಸುವ ಮೂಲಕ ಚಾರಿತ್ರಿಕ ಮಹತ್ವವನ್ನು ಪಡೆಯುತ್ತಾನೆ. ಇದಕ್ಕೆ ಈ ನಾಟಕದ ಮೂರು ಪ್ರಸಂಗಗಳನ್ನು ಎತ್ತಿ ತೋರಿಸಬಹುದು. ಈ ಪ್ರಸಂಗಗಳಲ್ಲಿ ಲೇಖಕ ನಿರ್ದಾಕ್ಷಿಣ್ಯವಾಗಿ ಸತ್ಯದ, ನ್ಯಾಯದ, ಶೋಷಿತರ ಪರವಾಗುವುದನ್ನು ಕಾಣುತ್ತೇವೆ. ಹೀಗೆಂದು ಭಾಸ ಶೋಷಕರ ವಿರುದ್ಧವೂ ಇಲ್ಲವೆಂಬುದನ್ನು ಮರೆಯುವಂತಿಲ್ಲ. ವಾಸ್ತವಗಳನ್ನು ಪೂರ್ವಗ್ರಹಗಳಿಲ್ಲದೇ ಗ್ರಹಿಸುತ್ತಾನೆಂಬುದೇ ಮುಖ್ಯ. ಇವುಗಳಲ್ಲಿ ವಿತಂಡವಾದಿಗಳು, ನಾಸ್ತಿಕರು, ಶ್ರಮಿಕರೂ ಇದ್ದಾರೆ.

ಅರಮನೆಯಲ್ಲಿ ರಾಣಿಯರ ನಡುವಿದ್ದ ವೈಷಮ್ಯ, ಮತ್ಸರಗಳನ್ನು ಬಯಲಿಗಿಡುವಲ್ಲಿ ಈ ರಾಜ್ಯದಲ್ಲಿ ಎಲ್ಲವೂ ಸುಂದರವಿಲ್ಲ ಎಂಬುದನ್ನೇ ಸೂಚಿಸುತ್ತಾನೆ. ಕೌಶಲ್ಯೆ, ಸುಮಿತ್ರೆ, ಕೈಕೆ ಈ ಮೂವರೂ ತಮಗೆ ಮಹಾರಾಜನನ್ನು ಮೊದಲು ಕಾಣುವ 'ಮರ್ಯಾದೆ' ಸಲ್ಲಬೇಕೆಂದು, ಅದಕ್ಕೆ ಕಾರಣಗಳನ್ನು ಸೂಚಿಸಿ ತಮ್ಮ ತಮ್ಮ ದಾಸಿಯರನ್ನು ಕಳಿಸುತ್ತಾರೆ. ಆದರೆ ಯಾರು ಸಿಟ್ಟಾದರೂ ತನಗೆ ತೊಂದರೆ ತಪ್ಪಿದ್ದಲ್ಲ ಎಂದು ತಿಳಿದಿರುವ ಅರಸ ಮೂವರನ್ನೂ ಸಮಾನವಾಗಿ ಮೆಚ್ಚಿಸಲು (ಧರ್ಮ, ಅರ್ಥ, ಕಾಮಗಳಂತೆ) ಎಲ್ಲರನ್ನು ಒಟ್ಟಿಗೇ ಭೇಟಿಯಾಗುತ್ತಾನೆ. ತನ್ನ ಮಂತ್ರಿ ಸುಮಂತ್ರನಿಗೆ ರಾಣಿಯರು ಪ್ರಸನ್ನರಾಗಿರುವಂತೆ

ನೋಡಿಕೊಳ್ಳುವ ಘನ ಕಾರ್ಯವನ್ನು ವಹಿಸುತ್ತಾನೆ. ರಾಜನಲ್ಲಿಯ ಗೊಂದಲ, ಅನುಕೂಲಸಿಂಧುತ್ವ, ಸಂದರ್ಭೋಚಿತ ಕುಟಿಲ ಚಾಣಾಕ್ಷತನಗಳನ್ನು ಪಕ್ಕದಲ್ಲಿರುವ ವಿದೂಷಕ ಮತ್ತೆ ಬಯಲಿಗೆಳೆಯುವುದು ಎಂಥ ಅದ್ಭುತ ನೋಡಿ : 'ಮಿತ್ರ, ನಿನಗೆ ಮೂವರೂ ರಾಣಿಯರಲ್ಲಿಯೂ ಸಮಾನ ಭಾವನೆ. ಆದ್ದರಿಂದ ಸುಮಿತ್ರೆಯ ಇಬ್ಬರು ಮಕ್ಕಳಿಗೂ ಕೈಕೆಯ ಮಗನಿಗೆ ಸಲ್ಲುವ ಪ್ರೇಮದ ಅರ್ಧದಷ್ಟು ಮಾತ್ರ ಸಿಕ್ಕುವುದು'. ರಾಜನ ಉತ್ತರ : ನಾಲ್ಕು ವೇದ, ನಾಲ್ಕು ಪುರುಷಾರ್ಥಗಳನ್ನು ಸಮನಾಗಿ ಪರಿಗಣಿಸುವಂತೆ ನಾಲ್ಕು ಮಕ್ಕಳನ್ನೂ ಸಮನಾಗಿ ಪರಿಗಣಿಸುವೆ. ನಾಲ್ಕು ವೇದಗಳಲ್ಲಿ ಯಾವುದೊಂದನ್ನೂ ಅಲ್ಪವೆನ್ನುವ ಬ್ರಾಹ್ಮಣ ವೈದಿಕನಾದಾನೆಯೇ ? ಆಗ ವಿದೂಷಕನ ಸ್ವಗತವಿದು : ಇವನಿಗೆ ಮೂವರು ರಾಣಿಯರೂ ಮೂರು ಪುರುಷಾರ್ಥಗಳಂತೆ, ನಾಲ್ವರು ಮಕ್ಕಳೂ ನಾಲ್ಕು ವೇದಗಳಂತೆ, ಐದನೆಯವನು ಕೂಡಿದರೆ ಏನು ಹೇಳುವನೋ ಕಾಣೆ. ಬ್ರಾಹ್ಮಣ, 'ಮಕ್ಕಳಂತಿರುವ ನಾನು ಪಾಲನೆಗೆ ಯೋಗ್ಯನಿದ್ದೇನೆ. ನಿನಗೆ ನನ್ನಲ್ಲಿ ಸ್ನೇಹವಿಲ್ಲದಾಯ್ತು. ಏಕೆಂದರೆ ಪುರುಷಾರ್ಥಗಳು ನಾಲ್ಕೇ, ವೇದಗಳು ಐದಲ್ಲವಲ್ಲ.' ಅದಕ್ಕೂ ರಾಜನಲ್ಲಿ ಉತ್ತರವಿಲ್ಲದಿಲ್ಲ. ಆತ ನಗುತ್ತ ಪಂಚಯಜ್ಞಗಳನ್ನು ಒಂದೇ ಸಮಭಾವದಲ್ಲಿ ನಡೆಸುವಂತೆ ನಿಮ್ಮ ಐವರನ್ನು ನಡೆಸುವೆ ಎನ್ನುತ್ತಾನೆ. ರಾಜನ ಕುಹಕಬುದ್ಧಿ ಹಾಸ್ಯಾಸ್ಪದವಾಗಿ ತೋರುತ್ತದೆ. ವಿದೂಷಕ 'ಇಲ್ಲಿ ಆರನೆಯವರಾರೂ ಇಲ್ಲ. ಇದ್ದಿದ್ದರೆ ಇವನ ಮಾತಿನ ಜಾಣ್ಮೆ ತಿಳಿಯುತ್ತಿತ್ತು' ಎಂದುಕೊಳ್ಳುತ್ತಾನೆ. ಹೀಗೆ ಮೊದಲನೇ ಅಂಕದಲ್ಲಿ ದಶರಥನ ಅರಮನೆಯ ವೈರುಧ್ಯಗಳನ್ನು ಒಂದೆಡೆ ರಾಜ ಮತ್ತು ರಾಣಿಯರು; ಇನ್ನೊಂದೆಡೆ ರಾಜ ಮತ್ತು ವಿದೂಷಕರ ಮೂಲಕ ಬಿಡಿಸಿಡುತ್ತಾನೆ ಲೇಖಕ.

ಎರಡನೇ ಅಂಕದಲ್ಲಿ ರಾಜ ರಾಮನಿಗೆ ಯುವರಾಜ ಪಟ್ಟವನ್ನು ಕಟ್ಟುವ ಬಗ್ಗೆ ಮಂತ್ರಿಯ ಜತೆ ಸಮಾಲೋಚಿಸುತ್ತಾನೆ. ಈ ಸಂದರ್ಭದಲ್ಲೂ 'ಜನರನ್ನು ಪೊರೆವ' ಪ್ರಸ್ತಾಪ ಬರುತ್ತದೆ. ರಾಜನಿಗೆ ಸತತವಾಗಿ ಜನರ ಭಯವಿರುತ್ತಿತ್ತೆಂದು ಇದರಿಂದ ಊಹಿಸಬೇಕಾಗುತ್ತದೆ. ಹಲವೆಡೆ ಗಣವ್ಯವಸ್ಥೆ, ಗಣರಾಜ್ಯಗಳು ಇದ್ದುದು ಈ ಸಂಗತಿಗೆ ಹೆಚ್ಚಿನ ಒತ್ತಾಸೆ ಸಿಕ್ಕಲು ಕಾರಣವಿರಬಹುದು. ರಾಮನಿಗೆ ಪಟ್ಟಾಭಿಷೇಕವಾದರೆ 'ವಿವಾದಕ್ಕೆ ಆಸ್ಪದವಿದೆ' ಎಂಬ ರಾಜನ ಮಾತು ಅರಮನೆಯಲ್ಲಿದ್ದ ಜನಗಳ ಮಧ್ಯದ ದುರಾಸೆಯನ್ನು ನಿದರ್ಶಿಸುತ್ತದೆ. ತನಗೆ ಎಲ್ಲ ಮಕ್ಕಳೂ ಸಮಾನರೆಂದು ವಿದೂಷಕನ ಮುಂದೆ ಹೇಳಿದ ಅರಸ ಈ ಸಂದರ್ಭದಲ್ಲಿ ಮಂತ್ರಿಯ ಮುಂದೆ ರಾಮನೇ ಪಟ್ಟಕ್ಕೆ ಏಕೆ ಯೋಗ್ಯನೆಂಬುದನ್ನು ವಿವರಿಸುತ್ತಾನೆ. ಇಲ್ಲಿ ಅವನ ಆತ್ಮವಂಚಕ ಸ್ವಭಾವವನ್ನು ಗುರುತಿಸಬಹುದು. ಅಷ್ಟೇ ಅಲ್ಲ, ರಾಮ ಮುಂದಿನ ದೊರೆಯಾಗುವುದಕ್ಕೆ ಬೇಕಾದ ಯೋಜನೆಯನ್ನೂ ಕಲ್ಪಿಸುತ್ತಾನೆ. ಈಗಿನಿಂದಲೇ ರಾಣಿಯರು, ಪ್ರಜರು, ಸಚಿವರು, ಸೇವಕರು ಬಾಲಕ ರಾಮನಲ್ಲಿ ಅನುರಕ್ತಿ ಬೆಳೆಸಿಕೊಳ್ಳುವಂತೆ ಮಾಡಬೇಕೆಂಬುದೇ ಅವನ ಯೋಜನೆ. ಇತ್ತ ಮೂವರೂ ರಾಣಿಯರು ಜತೆಯಲ್ಲೇ ಬರುತ್ತಿರಬೇಕಾದರೆ ರಾಜ ಅವರ ಗುಣಸ್ವಭಾವಗಳನ್ನು ವರ್ಣಿಸುತ್ತಾನೆ. ಅವರ ಜತೆ ರಾಜ್ಯದ ಇಡೀ ಆಸ್ತಿಯ ಹಂಚಿಕೆಯ ವ್ಯವಹಾರವನ್ನು ಚರ್ಚಿಸುವುದು ಕುತೂಹಲದ ವಿಷಯವಾಗಿದೆ. ಸುಮಿತ್ರೆಯ ಉದಾರವಾದ, ಸಮತೂಕದ ಬುದ್ಧಿ ಲಕ್ಷ್ಮಣನ ಭ್ರಾತೃಪ್ರೇಮಕ್ಕೆ ಪೂರಕವಾಗಿದ್ದರೆ, ಕೈಕೆ, ಕೌಶಲ್ಯೆಯರಿಗೆ

ತಮ್ಮ ತಮ್ಮ ಮಕ್ಕಳ ಮೇಲೆ ವಿಶೇಷ ವ್ಯಾಮೋಹ. 'ದಾಯಭಾಗ'ದ ಹಂಚಿಕೆಯಲ್ಲಿ ಮನುವನ್ನು; ರಾಜಧರ್ಮದಲ್ಲಿ ವಾಶಿಷ್ಠಮತವನ್ನು ಪ್ರಮಾಣವೆಂದು ಹೇಳುತ್ತ ರಾಜ ಹೆಚ್ಚು ಗುಣವಂತನಿಗೆ ಅರಸುಗದ್ದುಗೆ ಗುರುಗದ್ದುಗೆ ಎಂದು ಹೇಳುತ್ತಾನೆ. 'ಆಸ್ತಿಯ ಪಾಲಿನಲ್ಲಿ ಶ್ರೇಷ್ಠವಾದದ್ದು ಜ್ಯೇಷ್ಠನಿಗೆ ಎಂದು ಮನುವಚನ ಉಂಟು' ಎಂದು ಸುಮಿತ್ರೆ ತನ್ನ ರಾಮನ ಪರವಾದ ಧೋರಣೆಯನ್ನು ತೋರಿಸಿಕೊಳ್ಳುತ್ತಾಳೆ. ಕೌಶಲ್ಯೆ ಹೆಜ್ಜೆಹೆಜ್ಜೆಗೂ ತನ್ನ ಸ್ವಗತದಲ್ಲಿ ರಾಮನಿಗೇ ರಾಜ್ಯ ದಕ್ಕುವುದೆಂದು ಭಾವಿಸಿಕೊಳ್ಳುತ್ತಾಳೆ. ಆದರೆ ಹೆಚ್ಚು ಗುಣವಂತ ಮತ್ತು ಯೋಗ್ಯ ಎಂಬುದನ್ನು ಅಳೆಯುವುದು ಹೇಗೆ ? ಕೈಕೆಯ ಪ್ರಕಾರ 'ಯೋಗ್ಯತೆ ಎಂದೊಡನೆ ಅದನ್ನು ಒಬ್ಬೊಬ್ಬರು ಒಂದೊಂದು ರೀತಿ ಅಳೆದಾರು. ಒಬ್ಬರ ಅಭಿಪ್ರಾಯದಲ್ಲಿ ಯಾವನು ಯೋಗ್ಯನೋ, ಇನ್ನೊಬ್ಬರ ಅಭಿಪ್ರಾಯದಲ್ಲಿ ಅವನೇ ಅಯೋಗ್ಯನಿರಬಹುದು'. ಶೋಷಕರ ದೃಷ್ಟಿಯಲ್ಲಿ ಕೈಕೆ ಖಂಡಿತವಾಗಿ 'ವಿತಂಡವಾದಿ' ಇಲ್ಲವೇ 'ನಾಸ್ತಿಕಳು'. ಏಕೆಂದರೆ ಆಕೆ ಸತ್ಯದ ಖಚಿತ ವ್ಯಾಖ್ಯೆಯನ್ನು ನೀಡುತ್ತಿದ್ದಾಳೆ ಇಲ್ಲಿ. ರಾಜನ ಅಥವಾ ಮಂತ್ರಿಗಳ ಒಲವು, ನಿಲುವುಗಳಿಗೆ ಅನುಗುಣವಾಗಿ ಆಕೆ ಯೋಚಿಸುತ್ತಿಲ್ಲವಲ್ಲ. ಭಾಸನ ಸತ್ಯದ ಬಗೆಗಿನ ಪೂರ್ವಗ್ರಹವಿಲ್ಲದ, ನಿರ್ಭಿಡೆಯ ವಿಚಾರವನ್ನು ಈ ಮಾತು ಧ್ವನಿಸುತ್ತಿದೆ. ಸತ್ಯ ಯಾವಾಗಲೂ ಸಾಪೇಕ್ಷವಲ್ಲವೇ ? ನಾನು ವಿವರಿಸಲು ಉದ್ದೇಶಿಸಿರುವ ಮೂರು ಪ್ರಸಂಗಗಳಿಗೂ ಈ ಮಾತಿಗೂ ವಿಚಿತ್ರ ಸಂಬಂಧವೇರ್ಪಡುತ್ತದೆ. ಈ ಮಾತನ್ನೇ ಅನುಸರಿಸಿ ಹೇಳುವುದಾದರೆ ದುಡಿಯುವ ಜನತೆಗೆ ಯಾವುದು ಯೋಗ್ಯವೆಂದು ತೋರುತ್ತದೆಯೋ ಅದು ಆಳುವ ವರ್ಗಕ್ಕೆ ತೋರದಿರಬಹುದು. ಇಂಥ ದೃಷ್ಟಿಕೋನ ಮಾತ್ರ ವಾಸ್ತವಗಳನ್ನು, ಸಾಮಾಜಿಕ ವೈರುಧ್ಯಗಳನ್ನು ಸಮರ್ಪಕವಾಗಿ ಗ್ರಹಿಸಬಲ್ಲದು. ಅಂತೆಯೇ ಭಾಸ ಹೆಚ್ಚು ವಾಸ್ತವವಾದಿ, ಉದಾರವಾದಿ, ಸತ್ಯಪ್ರಿಯ ಲೇಖಕ. ಭಾಸನಲ್ಲಿರುವ ಗೊಂದಲಗಳ ಮಧ್ಯೆಯೂ ಅವನ ಪ್ರಾಮಾಣಿಕತೆಯನ್ನು ಮೆಚ್ಚದಿರಲಿಕ್ಕಾಗದು.

ಕೈಕೆಯ ಮಾತಿಗೆ ಅರಸನ ಸ್ವಗತದಲ್ಲಿ, ಏನಾದರೊಂದು ನೆಪದಿಂದ ನನ್ನ ಅಭೀಷ್ಟಕ್ಕೆ ವಿರುದ್ಧವಾದುದನ್ನೇ ಆಡಿ ತೋರಿಸಿ ಕಾರ್ಯವು ಕೈಗೂಡುವಂತೆ ಮಾಡುತ್ತೇನೆಂದು ನಿರ್ಧರಿಸಿಕೊಳ್ಳುತ್ತಾನೆ. ಪ್ರಕಾಶದಲ್ಲಿ 'ಕುಮಾರರು ನಾಲ್ವರೂ ಯೋಗ್ಯರು. ರಾಜ್ಯವನ್ನು ನಾಲ್ಕು ಪಾಲಾಗಿ ಒಡೆದು ಒಬ್ಬೊಬ್ಬರಿಗೆ ಒಂದೊಂದು ಪಾಲು ಕೊಡಬೇಕೆಂದಿದ್ದೇನೆ' ಎನ್ನುತ್ತಾನೆ. ಆಸ್ತಿ ಸಂಬಂಧ ಈ ನಾಲ್ವರಲ್ಲಿ ಉಂಟು ಮಾಡಬಹುದಾದ ಘರ್ಷಣೆಯನ್ನು ಕುರಿತು ರಾಜ ಯೋಚಿಸುವುದು ಪ್ರಭುತ್ವದ ಮುಖ್ಯ ಗೊಂದಲವನ್ನೇ ಬಿಡಿಸಿಟ್ಟಂತೆ. ಭಾಸನನ್ನು ಬಿಟ್ಟರೆ ಯಾವ ಸಂಸ್ಕೃತ ನಾಟಕಕಾರನಲ್ಲೂ ಈ ಬಗೆಯ ಚಿತ್ರಣ ಬರುವುದಿಲ್ಲವೆಂಬುದನ್ನು ಗಮನಿಸಬೇಕು. ರಾಜರನ್ನು ವೈಭವೀಕರಿಸಿ ಬರೆದವರೇ ಹೆಚ್ಚು. ಈ ದೃಷ್ಟಿಯಿಂದ ಶೇಕ್ಸ್‌ಪಿಯರ್ ನಮಗೆ ಮುಖ್ಯನೆಂದು ಕಾಣುತ್ತಾನೆ.

ಅರಸ ತನ್ನ ರಾಣಿಯರ ಎದುರೂ ಕೂಡ ಮುಕ್ತನಿಲ್ಲ. ರಾಜಕೀಯದ ವಿಷಜಾಲದಲ್ಲಿ ಎಲ್ಲರೂ ಸಿಕ್ಕು ಒದ್ದಾಡುತ್ತಿದ್ದಾರೆ. ಅವರ ದಾಂಪತ್ಯ ಸಂಬಂಧದಲ್ಲಿ ಆತ್ಮಘಾತಕತನ, ಕುತಂತ್ರಗಳು ಎದ್ದುಕಾಣುವುದನ್ನು ಭಾಸ ಬಿಡಿಸಿಡುತ್ತಾನೆ. ರಾಜ ಇದೇ

ಮಾತನ್ನು ಎಳೆದಾಡುತ್ತ ಕೈಕೆಗೆ 'ಮದುವೆಯಾಗುವ ಕಾಲದಲ್ಲಿ ವಿಧ್ಯುಕ್ತವಲ್ಲದ ಪ್ರತಿಜ್ಞೆ ಮಾಡಿದ್ದೆನಷ್ಟೇ. ಅದರಂತೆ ಭರತನೊಬ್ಬನಿಗೆಯೆ ರಾಜ್ಯದ ಅರ್ಹತೆ ಬರುತ್ತದೆ' ಎಂದು ಹೇಳುತ್ತಾನೆ. ರಾಜ್ಯ ಒಡೆದು ನಾಲ್ಕು ಹೋಳಾಗುವುದರ ಬಗ್ಗೆ ಕೈಕೆ 'ಹೊರಗಿನವನೊಬ್ಬನು ಸಮ್ರಾಟನಾಗುವುದಾದರೂ ಬೇಕು, ರಾಜ್ಯ ನಾಲ್ಕಾಗುವುದು ಖಂಡಿತ ಬೇಡ' ಎಂದು ವಿರೋಧಿಸುತ್ತಾಳೆ. ಕೌಶಲ್ಯೆ ಮೂರ್ಛೆ ಹೋಗುತ್ತಾಳೆ. ಇಂಥ ಇಕ್ಕಟ್ಟಿನಲ್ಲಿ ಸುಮಿತ್ರೆ ಸಮಸ್ಯೆಯನ್ನು ಬಗೆಹರಿಸಲು ಯೋಚಿಸುವುದು ಹೀಗೆ : 'ಮಹಾರಾಜ ವಿವಾಹಕಾಲದಲ್ಲಿ ಪ್ರತಿಜ್ಞೆ ಮಾಡಿದ ಕಾರಣ ಭರತನು ರಾಜನಾಗಬೇಕಾಯಿತು. ಹಿರಿಯನಾದುದರಿಂದ ರಾಮನು ರಾಜ್ಯಕ್ಕೆ ಅರ್ಹನಾಗಿದ್ದಾನೆ. ಆದ್ದರಿಂದ ರಾಜ್ಯವನ್ನು ಎರಡು ಪಾಲು ಮಾಡಿ ಒಂದೊಂದನ್ನು ಒಬ್ಬೊಬ್ಬರಿಗೆ ಕೊಡಬೇಕು'. ರಾಜ ನಿನ್ನ ಮಕ್ಕಳಿಗೆ ಏನು ಎಂದಾಗ ಆಕೆ ಇಬ್ಬರನ್ನು ಇಬ್ಬರೂ ಮಕ್ಕಳು ಓಲೈಸುತ್ತ ಇರುವರು ಎನ್ನುತ್ತಾಳೆ. ಈ ಎಲ್ಲ ಪ್ರಸಂಗದಲ್ಲಿ ದಡ್ಡಳಂತೆ ತೋರಿದರೂ ಸುಮಿತ್ರೆ ಮಾತ್ರ ಉನ್ನತ ಸ್ವಭಾವದವಳಾಗಿ ಸಮತೂಕದವಳಾಗಿ, ನಿಃಸ್ವಾರ್ಥಿಯಾಗಿ ಕಾಣುತ್ತಾಳೆ. (ಇದಕ್ಕೆ ಹಿನ್ನೆಲೆ ಏನೇ ಇರಲಿ) ಇದನ್ನು ರಾಜ ಕೈಕೆಗೆ ಆಡಿಯೂ ತೋರಿಸುತ್ತಾನೆ. ಸುಮಿತ್ರೆಗೆ ಘರ್ಷಣೆ ಬೇಕಿಲ್ಲ. 'ನಾನು ವಾಕ್‌ಪಟುವಲ್ಲ. ಹೋರಾಡುವ ಶಕ್ತಿ ನನಗಿಲ್ಲ' ಎಂದು ತನ್ನ ದೌರ್ಬಲ್ಯವನ್ನು ಆಕೆ ಒಪ್ಪಿಕೊಳ್ಳುತ್ತಾಳೆ. ಕೊನೆಗೆ 'ರಾಜ್ಯಕ್ಕೆ ಯೋಗ್ಯನು ರಾಮನೇ' ಎಂದು ಹೇಳಿಬಿಟ್ಟು ಕೈಕೆಯೂ ದೊಡ್ಡವಳಾಗುತ್ತಾಳೆ. ಇದರಿಂದ ಕೌಶಲ್ಯೆ, ರಾಜರಿಗೆ ಹಿಗ್ಗು. ಆದರೂ ರಾಜ ತನ್ನ ಪ್ರತಿಜ್ಞೆಯ ಬಗ್ಗೆ ಒದ್ದಾಡುವ ನಾಟಕವಾಡುತ್ತಾನೆ. 'ಪ್ರತಿಜ್ಞಾಹಾನಿ ಮಹಾಪಾತಕ, ಹೀಗೆಂದು ಸಂತರು ಎಣಿಸುತ್ತಾರೆ' ಎಂದ ಆತನಿಗೆ ಕೈಕೆ 'ನಿಮ್ಮಂಥ ರಾಜರ್ಷಿಗಳಾದವರು ಪ್ರತಿಜ್ಞೆಯನ್ನು ಮುರಿಯುವುದಾದರೆ ಅದು ಮಹಾ ಅನರ್ಥವೇ ಸರಿ' ಎನ್ನುತ್ತಾಳೆ. ತದನಂತರ ತಾನೇ 'ಕಾರ್ಯವನ್ನು ಕುರಿತು ವಿಚಾರ ಮಾಡುವಾಗ ಕಾರಣದ ಪ್ರಾಧಾನ್ಯವನ್ನು ಉಪೇಕ್ಷೆ ಮಾಡಲಾಗದು. ನನ್ನನ್ನು ಸಂತೋಷ ಪಡಿಸುವುದಕ್ಕಾಗಿಯೇ ಮಹಾರಾಜರು ನನ್ನ ಮಗನಿಗೆ ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞೆ ಮಾಡಿದ್ದಷ್ಟೇ. ಭರತನಿಗೆ ರಾಜ್ಯವನ್ನು ಕೊಡುವುದರಿಂದ ನನಗೆ ಯಾವ ಆನಂದ ಲಭಿಸುವುದುಂಟೋ ಅದೇ ಆನಂದ ರಾಮನಿಗೆ ರಾಜ್ಯವನ್ನು ಕೊಡುವುದರಿಂದಲೂ ಲಭಿಸುತ್ತದೆ' ಎನ್ನುತ್ತಾಳೆ. ಕೈಕೆ ದೊಡ್ಡವಳಾಗುತ್ತಲೇ ಹೋಗುವುದು ಹೀಗೆ. ಅಥವಾ ಪ್ರಸಂಗದ ಒತ್ತಡದಿಂದ ಆಕೆ ಸೋಲುತ್ತ ಹೋಗುತ್ತಾಳೆಂದೂ ಹೇಳಬಹುದು. ಆದರೆ ರಾಜ ಅಷ್ಟಕ್ಕೇ ಸುಮ್ಮನಾಗದೇ ಆಕೆಯನ್ನು ಮತ್ತೆ ಪರೀಕ್ಷಿಸುತ್ತಾನೆ. 'ಭರತ ಸಹ ಗುಣಶಾಲಿ, ರಾಜ್ಯಕ್ಕೆ ಯೋಗ್ಯ'. ಆಗ ಕೈಕೆ ಹೇಳುವ ಮಾತು ನೋಡಿ : ಗುಣಗಳಿಲ್ಲದ ಜನರಲ್ಲಿ ಅಲ್ಪಗುಣಿಯೂ ಉನ್ನತಗುಣಿ ಯಾಗುವನು, ಕತ್ತಲೆಯ ದೀಪದಂತೆ. ಆದರೆ ಸೂರ್ಯನ ಬೆಳಕಿನಲ್ಲಿ ದೀಪದಂತೆ ಅಧಿಕ ಗುಣಗಳ ಮಧ್ಯೆ ಅಲ್ಪಗುಣಿ ಗುಣಿಯಲ್ಲ. ಹಾಗೆ ರಾಮ ಉನ್ನತಗುಣಿ.' ಆಗ ಎಲ್ಲರೂ ಕೈಕೆಯನ್ನು ಹೊಗಳುವವರೇ. 'ಆರ್ಯಪುತ್ರ, ಎಷ್ಟೇ ಪ್ರೇಮವಿದ್ದರೂ ನಾನು ಸದಾ ಸತ್ಯವನ್ನೇ ಆಡತಕ್ಕವಳು. ಇದೇ ನನ್ನ ಗುಡುಗು, ಅಯುಕ್ತವಾದುದನ್ನು ಎಂದೂ ಹೇಳುವುದಿಲ್ಲ; ಇದೇ ನನ್ನ ಅಮೃತದ ಮಳೆ' ಎಂದು ಸಂದರ್ಭೋಚಿತ ಭಾಷಣ ಕುಟ್ಟುತ್ತಾಳೆ. ರಾಮ ಯೋಗ್ಯಗುಣಿ

ಎಂದು ಸತ್ಯವನ್ನೇ ಹೇಳುತ್ತಾಳೆಂದು ಭಾವಿಸಿಕೊಂಡರೂ ಅರಸನ ಪ್ರತಿಜ್ಞೆಯ ಸತ್ಯತೆಯನ್ನು ಯಾಕೆ ಪ್ರಶ್ನಿಸುವುದಿಲ್ಲವಲ್ಲ ? ಅಂತೂ ಪ್ರೇಮವನ್ನು ಮೀರಿ ಕೈಕೆ ಸತ್ಯದ ಪರ ನಿಲ್ಲುತ್ತಾಳೆ. ಬಹುಶಃ ಈಗ ಆಕೆಗೆ ಪ್ರೀತಿ ಎಂದರೆ ಏನೂ ಅರ್ಥವಿಲ್ಲದ್ದೆಂಬ 'ಸತ್ಯ' ತಿಳಿದಿದೆ. ಈ ಇಡೀ ಪ್ರಸಂಗವನ್ನು ಗಮನಿಸಿದರೆ ಭಾಸ ಕೈಕೆಯ ಮೂಲಕ ಗಂಭೀರವಾದ ಚರ್ಚೆಗೆ ಇಳಿದಿದ್ದಾನೆಂದು ಭಾಸವಾಗುತ್ತದೆ. ಇದೆಲ್ಲವೂ ಮತ್ತೆ ನಾನು ವಿವೇಚಿಸಲಿರುವ ಮೂರೂ ಪ್ರಸಂಗಗಳಿಗೆ ಪೂರಕವಾಗಿ ನಿಲ್ಲುತ್ತದೆ. ಭಾಸ ಬರೀ ಜಳ್ಳು ಕುಟ್ಟುತ್ತಿಲ್ಲ. ರಾಜಶಾಹಿಯ ಹುಳುಕನ್ನು ಮುಚ್ಚಿಟ್ಟು ಒಣ ಆಡಂಬರದ ವರ್ಣನೆಗೆ ಬೀಳದೇ; ಸುಳ್ಳು ಪ್ರತಿಷ್ಠೆಯ ಕೃತಕ ವ್ಯಾಪಾರಕ್ಕಿಳಿಯದೇ ಇದೆಲ್ಲದರಿಂದ ಸಿಡಿದು ನಿಲ್ಲಲು ಯತ್ನಿಸುತ್ತಾನೆ. ಲೇಖಕನಿಗೆ ಸಹಜವಾದ ಸ್ವಾತಂತ್ರ್ಯ ಪ್ರವೃತ್ತಿಗೆ ಜೋತುಬೀಳುತ್ತಾನೆ.

ರಾಮನ ತಾಯಿಯನ್ನೂ ಭಾಸ ಟೀಕಿಸದೇ ಬಿಡುವುದಿಲ್ಲ. 'ಸಂಜೆಯಲ್ಲಿ ಆಡುವುದಕ್ಕಾಗಿ ಹೋಗುವ ಮಕ್ಕಳು ರಾಮನನ್ನು ಮುಂದಿರಿಸಿಕೊಂಡು ಹಿರಿಯಳೆಂದು ನನ್ನನ್ನು ನಮಸ್ಕರಿಸುವುದಕ್ಕೆ ಬರುತ್ತಾರೆ' ಎಂಬುದು ಕೌಶಲ್ಯೆಯ ಹೆಮ್ಮೆ. ಕೈಕೆ 'ಎಲ್ಲ ಕುಮಾರರೂ ಎಲ್ಲ ತಾಯಂದಿರನ್ನು ವಂದಿಸಲೆಂದು ಎಲ್ಲರ ಬಳಿಗೆ ಬರುತ್ತಾರೆ. ಅವರಲ್ಲಿ ಯಾರಲ್ಲಿಯೂ ಇವಳು ಹಿರಿಯಳು, ಇವಳು ಕಿರಿಯಳು ಎಂಬ ಭಾವವಿಲ್ಲ' ಎಂದು ಮುಖಕ್ಕೆ ಹೊಡೆದಂತೆ ಹೇಳುತ್ತಾಳೆ. ಕೌಶಲ್ಯೆಯ ಈ ದುರಭಿಮಾನ, ಕೈಕೆಯ ಸತ್ಯಪ್ರಿಯತೆಗಳನ್ನು ದಶರಥ ಕೌಶಲ್ಯೆ ಹಿರಿಯಳೆಂಬ ಅಭಿಮಾನಿ, ಕೈಕೆ ಮುಂಗೋಪಿ ಎಂದು ಅರ್ಥೈಸುತ್ತಾನೆ. ಇವರೆಲ್ಲ ಹೋದ ನಂತರ ರಾಜ ಸುಮಂತ್ರನನ್ನು ಕರೆಸುತ್ತಾನೆ. ಮತ್ತೆ ರಾಮಾದಿಗಳ ಸ್ತುತಿ. ಸುಮಂತ್ರ, 'ರಾಜ್ಯದಾಸೆ ಎಂಬುದು ಸೂಜಿಮೊನೆ ಇದ್ದಂತೆ, ಅದೆಷ್ಟು ಹರಿತವಿದ್ದರೂ ನೀರನ್ನು ಎರಡಾಗಿ ಹೋಳು ಮಾಡದು' ಎನ್ನುತ್ತಾನೆ.

ಮೂರನೇ ಅಂಕದ ಪ್ರಾರಂಭದಲ್ಲಿ ಬಲಯುತವಾದ ರಾಮನನ್ನು ಕದ್ದೊಯ್ಯಲು ವೈರಿಯಾದ ರಾವಣ ತನ್ನ ಮಂತ್ರಬಲದಿಂದ ಅದೃಶ್ಯದೇಹಿಯಾಗಿ ಬಂದರೆ, ರಾಮನನ್ನು ಕಾಪಾಡಲು ಮಹೇಂದ್ರನ ಇಷ್ಟದಂತೆ ಕುಬೇರನೂ ಇಬ್ಬರು ಗಂಧರ್ವರನ್ನು ಕಳಿಸುತ್ತಾನೆ. ಪ್ರಬಲನಾದ ರಾಮನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಲು ವಿಶ್ವಾಮಿತ್ರನೂ ಅದೃಶ್ಯದೇಹಿಯಾಗಿ ಬರುತ್ತಾನೆ.

ಈ ಸಂದರ್ಭದಲ್ಲಿ ವಶಿಷ್ಠ ರಾಮಾದಿಗಳನ್ನು ಕುರಿತು 'ಎಲ್ಲ ವಿದ್ಯೆಯನ್ನೂ ಕಲಿಸಿದೆ, ಕೃತಾರ್ಥನಾದೆ. ಜ್ಞಾನದಲ್ಲಿ ಎಲ್ಲರೂ ಸಮನಾಗಿದ್ದೇವೆ. ಋಷಿಗಳ ಧರ್ಮಶಾಸ್ತ್ರಗಳನ್ನೂ ಕಲಿಸಿರುವೆ.' ಎಂದು ಹೇಳುತ್ತಾನೆ. ಶಿಷ್ಯರೆಲ್ಲ ಅಭ್ಯಾಸ ಮಾಡಿಕೊಳ್ಳಲು ಊರ ಹೊರಗೆ ಬರುತ್ತಾರೆ. ಭರತ, ಶತ್ರುಘ್ನ, ಲಕ್ಷ್ಮಣರು ತಮ್ಮ ತಮ್ಮ ಬಿಲ್ಲುವಿದ್ಯೆ ತೋರ್ಪಡಿಸುತ್ತಾರೆ. ರಾಮನೂ ಅವರ ವಿದ್ಯೆಯನ್ನೇ ತೋರಿಸುವಾಗ ವಿಶ್ವಾಮಿತ್ರ ರಾವಣರು ಅವನ ಯಾವ ಬಾಣವೂ ಸಫಲವಾಗಲು ಬಿಡುವುದಿಲ್ಲ. ವಾಯವ್ಯಾಸ್ತ್ರವನ್ನು ವಿಫಲ ಮಾಡಿದರೂ ಆಗ್ನೇಯಾಸ್ತ್ರಕ್ಕೆ ರಾವಣ ಹೆದರಿದ್ದನ್ನು ವಿಶ್ವಾಮಿತ್ರ ಗುರುತಿಸುತ್ತಾನೆ. ರಾವಣ ಓಡಿಹೋಗತೊಡಗಿದಾಗ ವಿಶ್ವಾಮಿತ್ರನೂ ಹಿಂಬಾಲಿಸುತ್ತಾನೆ. ಇತ್ತ ರಾಮ ಗುರಿಯಿಡುವ

ಸಾಹಸವಲ್ಲಿದ್ದಾಗ, ಮಂಥರೆ ಮತ್ತಿತರ ದಾಸಿಯರು ಬರುತ್ತಾರೆ. ದಾಸಿಯರನ್ನು ಭಾಸ ನೈಜವಾಗಿ ಚಿತ್ರಿಸುವುದು ಅವನ ವಾಸ್ತವ ದೃಷ್ಟಿಯ ಮಹತ್ತಮ ನಿದರ್ಶನವಾಗಿದೆ. ಈ ಸಂದರ್ಭವನ್ನು ಸ್ವಲ್ಪ ವಿವರವಾಗಿ ನೋಡಬೇಕು.

**ಮಂಥರೆ** : ಎಲೆ ದಾಸಿಯರೇ, ದಾಸಿಯರು ಯಾವಾಗಲೂ ಪರರ ಕೈ ಕೆಳಗೆ ಊಳಿಗದಲ್ಲಿಯೇ ಇರಬೇಕು. ನೀವು ಸೇವಾಕಾರ್ಯವನ್ನು ಬಿಟ್ಟುಬಂದು ಇಲ್ಲಿ ಏಕೆ ಆಟವಾಡುತ್ತಿದ್ದೀರಿ ? ನೀವು ಬಂದಲ್ಲಿಗೆ ನಿಮ್ಮ ನಿಮ್ಮ ಕೆಲಸಕ್ಕೆ ಹೊರಟುಹೋಗಿರಿ.

**ಮಧುರಿಕೆ** : ನಾವು ಮಾಡಬೇಕಾದ ಕೆಲಸ ಮುಗಿಯಿತು. ಅಲ್ಲಿ ಬೇರೆ ಚೇಟಿಯರಿದ್ದಾರೆ. ನಾವು ಕ್ಷಣಕಾಲ ವಿಶ್ರಾಂತಿಗಾಗಿ ಬಂದವರು. ಕೆಲಸದ ವೇಳೆಗೆ ಅಲ್ಲಿಯೇ ಹೋಗುತ್ತೇವೆ.

**ಮಂಥರೆ** : ಯಾವಾಗ ಯಾವ ಕೆಲಸ ಬೀಳಬಹುದೆಂಬುದು ನಿಮಗೆ ಹೇಗೆ ತಿಳಿಯುತ್ತದೆ ? ರಾಣಿಯರ ಕಾರ್ಯಗಳು ಹೆಚ್ಚುಕಡಿಮೆ ಆಗುವುದುಂಟು, ಹಿಂದುಮುಂದಾಗುವುದುಂಟು.

**ಚೇಟಿ** : ನೀನೂ ದಾಸಿ ತಾನೇ ? ನಾವು ಹೇಗೆ ಇತರ ರಾಣಿಯರ ಊಳಿಗ ಮಾಡುತ್ತೇವೆಯೋ ಹಾಗೇ ನೀನೂ ಕೈಕೆಯ ಊಳಿಗ ಮಾಡುತ್ತಿಯೇ.

**ಮಂಥರೆ** : ಕೈಕೆ ನನ್ನ ಸಾಕುಮಗಳು. ಸಖಿಯೂ ಹೌದು. ನಾನು ಅವಳ ಊಳಿಗದವಳಲ್ಲ. ಅವಳಿಗೆ ಸಹಾಯ ಮಾಡುವವಳು. ನೀವು ಗರ್ಭದಾಸಿಯರು. ನಿಮಗೆ ಅದು ಹೇಗೆ ತಿಳಿಯಬೇಕು ?

**ಚದುರಿಕೆ** : ಆಹಾ, ನೀನು ದಾಸಿಯಲ್ಲವೇನು ? ಹಾಗಾದರೆ ದಾಸಿಯಂತೆ ಏಕೆ ಕೂಗಾಡುತ್ತಿರುವೆ?

**ಮಂಥರೆ** : ತಾಯಿಯರಲ್ಲಿ ತಾಯಿತನ, ಆಳುವತನ ಎರಡೂ ಕಾಣಲಾರವು. ಸೇವಿಪ, ಲಾಲಿಪ ನಾನು ಪರದೇವತೆ.

**ಮಧುರಿಕೆ** : ನಿನ್ನ ಹಾಗೆ ಊಳಿಗದ ಕೆಲಸದವಳು ತಾಯಿಯಾಗುವುದಾದರೆ ನಾವೆಲ್ಲ ದೇವಿಯರಿಗೆ ತಾಯಿಯರೇ ಸರಿ.

**ಮಂಥರೆ** : ನಾನು ನಿಮ್ಮಂತಲ್ಲ. ಸಂಸ್ಕೃತ ಆಡತಕ್ಕವಳು.

**ಚದುರಿಕೆ** : ನಿನ್ನ ಸಂಸ್ಕೃತದಲ್ಲಿಯೂ ಅವಿನಯ, ಗರ್ವೋಕ್ತಿಗಳೇ ತುಂಬಿಕೊಂಡು ನಿನ್ನ ದಾಸಿತ್ವವನ್ನೇ ಎತ್ತಿ ತೋರುತ್ತವೆ. ಅಭಿಜಾತರು ಗರ್ವಭರಿತರಲ್ಲ.

ಈ ಪ್ರಸಂಗ ತುಂಬ ನೈಜವಾಗಿದೆ. ಗರ್ಭದಾಸಿ, ಸಂಸ್ಕೃತದ ಬಗ್ಗೆ ಇದ್ದ ಒಣ ಪ್ರತಿಷ್ಠೆ, ಊಳಿಗದವರ ಹೀನ ಸ್ಥಿತಿ ಮೊದಲಾದ ವಿಶಿಷ್ಟ ಸಂಗತಿಗಳನ್ನು ನಗ್ನವಾಗಿ ಚಿತ್ರಿಸುತ್ತಿದ್ದಾನೆ ಭಾಸ. ಚದುರಿಕೆ, ಮಧುರಿಕೆಯರು ದಾಸಿಯರಾದರೂ ಅವರ ಮಾತು, ನಯಗಾರಿಕೆಗಳು ಅವರೇ ಹೇಳುವಂತೆ ಅವಿನಯ, ಗರ್ವಗಳಿಂದೇನೂ ಕೂಡಿಲ್ಲ. ಉಳಿದೆಲ್ಲ ದಾಸಿಯರಿಗಿಂತ ತಾನು ಉನ್ನತ ಮಟ್ಟದವಳೆಂದು ಹೇಳಿಕೊಳ್ಳಲು ಮಂಥರೆ ಸಂಸ್ಕೃತ ಭಾಷೆಯ ಅರಿವನ್ನು ಬಳಸಿಕೊಳ್ಳುತ್ತಿರುವುದು ಗಮನಾರ್ಹವಾಗಿದೆ. ಸಂಸ್ಕೃತವನ್ನು ಕಲಿಯುವುದರಿಂದಾಗುವ ಲಾಭವನ್ನು ಕುರಿತು ಮುಂದೆ ಮತ್ತೊಂದು ಪ್ರಸಂಗದಲ್ಲೂ ಲೇಖಕ ಬರೆಯುತ್ತಾನೆ.

ಈ ಅಂಕದಲ್ಲಿ ಮತ್ತೂ ಒಂದು ಮಹತ್ವದ ಪ್ರಸಂಗವಿದೆ. ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವಿನ ವೈರುಧ್ಯವನ್ನು ಇಲ್ಲಿ ಗುರುತಿಸಬಹುದಾಗಿದೆ. ವಶಿಷ್ಠ, ವಿಶ್ವಾಮಿತ್ರನ ಬಗ್ಗೆ ರಾಮಾದಿಗಳೆದುರು ಹೇಳುವಾಗ ಅದು ಪ್ರಸ್ತಾಪವಾಗುತ್ತದೆ. ಅನಾರ್ಯನಾದ ರಾವಣನಿಗೆ ದಶರಥ, ವಿಶ್ವಾಮಿತ್ರರಲ್ಲದೇ ದೇವತೆಗಳೂ ಹೆದರಿದ್ದನ್ನು ಈ ಅಂಕ ಸೂಚಿಸುತ್ತದೆ. ರಾಮನನ್ನು ರಕ್ಷಿಸಲು ವಶಿಷ್ಠ, ವಿಶ್ವಾಮಿತ್ರ ಮತ್ತು ದೇವತೆಗಳೆಲ್ಲರೂ ಯೋಜನಾಬದ್ಧರಾಗುತ್ತಾರೆ. ಆದರೆ ಮಂಥರೆ ಎಂಬ ದಾಸಿ ತನ್ನ ಒಡತಿ ಕೈಕೆ ಮತ್ತು ಅವಳ ಮಗನ ಮೇಲಿನ ಪ್ರೇಮದಿಂದ ರಾಮನನ್ನು ದ್ವೇಷಿಸುತ್ತ, ಭರತನನ್ನು ರಾಜನನ್ನಾಗಿ ಮಾಡುವ ಪಣ ತೊಡುತ್ತಾಳೆ. ಆಕೆಯ ಅಭಿಪ್ರಾಯದಲ್ಲಿ ವಶಿಷ್ಠ 'ಕಪಟ ಪಂಡಿತ'. 'ದಾಸೀಪುತ್ರರಾದ ಪರಿಜನರೂ ಸಹ ರಾಮನನ್ನೇ ಪ್ರೀತಿಸುತ್ತಾರೆ... ರಾಮ ರಾವಣರಲ್ಲಿ ವಿರೋಧ ಉಂಟಾದರೆ ಭರತನಿಗೇ ರಾಜ್ಯ ನಿಷ್ಕಂಟಕವಾಗಿ ಲಭಿಸುತ್ತದೆ... ಅನಾರ್ಯರು, ಅಸುರರು, ಕುಲಗೆಟ್ಟವರು, ಪಿಶಾಚಿಗಳು ಎಲ್ಲರೂ ರಾಮನ ಮತ್ತು ದಶರಥನ ಹಗೆಗಳಾಗುವಂತೆ ಮಾಡಿ ನಾನು ಭರತನನ್ನು ಮಹಾರಾಜನನ್ನಾಗಿ ಮಾಡುತ್ತೇನೆ' ಎಂದುಕೊಳ್ಳುತ್ತಾಳೆ ಆಕೆ. ವಶಿಷ್ಠ, ಸುಮಂತ್ರರನ್ನು ಮೀರಿಸಿ ಈಕೆ ಗೆಲ್ಲುವ ಪಣ ತೊಡುವುದು ಅಚ್ಚರಿಯ ಸಂಗತಿಯೇ.

ರಾಮನನ್ನು ರಾಜನನ್ನಾಗಿ ಮಾಡುವ ಪ್ರಯತ್ನದ ಈ ಪ್ರಸಂಗವನ್ನು ಭಾಸ ಸೂಕ್ಷ್ಮವಾಗಿ ವಿಡಂಬಿಸುತ್ತಿದ್ದಾನೆ. ವಶಿಷ್ಠ, ನಾಳೆ ಬರಲಿರುವ ವಿಶ್ವಾಮಿತ್ರನಿಗೆ ನೀವೆಲ್ಲ ಕಾಲು ಮುಟ್ಟಿ ನಮಸ್ಕರಿಸಬೇಕು ಎಂದಾಗ ರಾಮ, 'ಆದರೆ ಅವರು ಕ್ಷತ್ರಿಯರೆಂದು ಕೇಳಿದ್ದೇವಲ್ಲ' ಎನ್ನುತ್ತಾನೆ. ಅದಕ್ಕೆ ವಶಿಷ್ಠ 'ಆತ ಕ್ಷತ್ರಿಯ ಪುತ್ರನೇ ಆದರೇನು ?' ಎನ್ನುತ್ತಾನೆ.

ರಾಮ : ಬ್ರಾಹ್ಮಣರಿಗೆ ಪಾದಾಭಿವಂದನ ಮಾಡುವ ಹಾಗೆ ಕ್ಷತ್ರಿಯರಿಗೆ ಮಾಡಬಹುದೇ ?

ವಶಿಷ್ಠ : ಅವರು ಅತಿಶಯವಾಗಿ ತಪಸ್ಸು ಮಾಡಿದ್ದಾರೆ.

ರಾಮ : ಬ್ರಾಹ್ಮಣತ್ವಕ್ಕೆ ಶ್ರುತ, ತಪಸ್ಸು, ಜನ್ಮ ಮೂರೂ ಇರುವವನೇ ಬ್ರಾಹ್ಮಣನೆಂದು ಲೋಕ ಹೇಳುವುದು.

ವಶಿಷ್ಠ : ಈ ವಚನ ಸಾಮಾನ್ಯವಾದ ತಪಸ್ಸನ್ನು ಕುರಿತು ಹೇಳಿದ್ದು. ಆದರೆ ಮಹಾ ತಪಸ್ಸಿನ ಫಲ ಲೋಕಾತೀತವಾದದ್ದು.

ಈ ಸಂದರ್ಭದಲ್ಲಿ ಭಾಸ ಪುರೋಹಿತಶಾಹಿಯನ್ನು ವೈಚಾರಿಕ ಇಕ್ಕಟ್ಟಿನಲ್ಲಿ ಸಿಕ್ಕಿಸುವ ತಂತ್ರವನ್ನು ಬಳಸುತ್ತಿರುವನೇ ? ವಶಿಷ್ಠನ ಸ್ವವೈರುಧ್ಯಾತ್ಮಕ ಹೇಳಿಕೆ, ಅನುಕೂಲಸಿಂಧುತ್ವ ಸಿದ್ಧಾಂತಗಳನ್ನು ನೋಡಿದರೆ ಹಾಗೆ ತೋರುತ್ತಿದೆ.

ರಾಮ : ಹೇಗೆ ?

ವಶಿಷ್ಠ : ಮಹಾತಪಸ್ಸಿನ ಫಲವಾಗಿ ಕೇವಲ ವಿಶ್ವಾಮಿತ್ರನಷ್ಟೇ ಅಲ್ಲ, ಅವನ ತಂದೆ ತಾತರು ಸಹ ಋಷಿತ್ವವನ್ನು, ಬ್ರಹ್ಮತ್ವವನ್ನು ಪಡೆದರು.

ಭರತ : ಅವರು ಬ್ರಾಹ್ಮಣರಿರಲಿ, ಅಬ್ರಾಹ್ಮಣರಿರಲಿ ನಮಗೇನು ? ಗುರುಗಳ ಆದೇಶದಂತೆ ನಡೆಯುವುದು ಕರ್ತವ್ಯ...

ಆಶ್ಚರ್ಯವೆಂದರೆ ಈ ವರೆಗೆ ಚಿಕಿತ್ಸಕ ಬುದ್ಧಿಯಿಂದ ಪ್ರಶ್ನಿಸುತ್ತಿದ್ದ ರಾಮ ಭರತನ ಮಾತಿಗೆ ಸಮ್ಮತಿಸುವುದು. ಇಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರ ನಡುವಿನ ವೈರುಧ್ಯವನ್ನು

ರಾಮನ ಮಾತಿನ ಮೂಲಕ ತಿಳಿಯಲವಕಾಶವಿದೆ. ಜನ್ಮದಿಂದ ಬ್ರಾಹ್ಮಣನಾದವ ಗೌರವಾರ್ಹ, ತಪದಿಂದ ಬ್ರಾಹ್ಮಣನಾಗುವವ ಅನುಮಾನಾಸ್ಪದನು ಎಂಬ ಗೊಂದಲವಿದು.

ನಾಲ್ಕನೇ ಅಂಕದ ಪ್ರಾರಂಭದಲ್ಲಿ ನಾಲ್ಕು ಜನ ವೈತಾಳಿಕರ ವಿಡಂಬನಾತ್ಮಕ ಸಂವಾದವಿದೆ. ಇಲ್ಲಿಯೂ ಸಂಸ್ಕೃತ ಭಾಷೆಯ ಬಗೆಗಿನ ಗೌರವದ ಉಲ್ಲೇಖವಿದೆ. ನಾಲ್ಕನೆಯವ ಹೇಳುತ್ತಾನೆ : ನಾನು ಸಂಸ್ಕೃತದಲ್ಲಿ ಹಾಡುತ್ತೇನೆ. ನಿಮಗ್ಯಾರಿಗೂ ಸಂಸ್ಕೃತ ಬರದು. ಆದ್ದರಿಂದ ನನ್ನ ಹಾಡಿಗೆ ಬೆಲೆ ಬರುವಂತಿಲ್ಲ. ಮಹಾರಾಜರು ಎಂದೂ ನಿಮಗೆ ಹಾಡಲು ಹೇಳುವುದಿಲ್ಲ. ಅದೇ ನನ್ನ ಗೀತಜ್ಞತೆಗೆ ಸಾಕು.

**ಮಾಳವಕ :** ಗೋಪಿಲ ಭಾವನಿಗೆ ಸಂಸ್ಕೃತ ಗೊತ್ತು. ಮಹಾರಾಜರು ಅವನ ಗೀತ ಕೇಳುತ್ತಾರೆ.

ಈ ಸಂದರ್ಭದಿಂದ ಗೊತ್ತಾಗುವಂತೆ ಮಹಾರಾಜರ ಅಭಿರುಚಿಯ ಮಟ್ಟಕ್ಕೆ ಕಲಾವಿದರು ಏರಬೇಕಾದರೆ ಅವರಿಗೆ ಸಂಸ್ಕೃತ ತಿಳಿದಿರಬೇಕಿತ್ತು. ಈ ಹಿಂದೆ ದಾಸಿಯರ ಪ್ರಸಂಗದಲ್ಲಿಯೂ ಸಂಸ್ಕೃತದ ಬಗ್ಗೆ ವಿಷಯ ಬಂದಿತ್ತು. ನಾಲ್ವರು ವೈತಾಳಿಕರ ಜತೆ ವಿದೂಷಕನೂ ಸೇರಿಕೊಳ್ಳುತ್ತಾನೆ. ವಿಶ್ವಾಮಿತ್ರ ಅರಮನೆಗೆ ಬರಲಿರುವ ವಿಷಯವನ್ನು ಅವರು ಮಾತನಾಡುತ್ತಾರೆ. ಋಷಿಗಳನ್ನು ವಿಡಂಬಿಸುವ ಮಾತುಗಳೇ ಇಲ್ಲೂ ಪ್ರಸ್ತಾಪವಾಗುವುದು. ಋಷಿಗಳ ಬಗೆಗಿದ್ದ ಸುಳ್ಳು ಗೌರವವನ್ನು, ಜಳ್ಳು ಅಲೌಕಿಕತೆಯನ್ನು ವ್ಯಂಗ್ಯ ಮಾಡಲಾಗಿದೆ. ಈ ಪ್ರಸಂಗವೂ ಕೂಡ ಭಾಸ ಈ ನಾಟಕವನ್ನು ಬರೆಯುವ ಕಾಲದಲ್ಲಾದರೂ ನಾಸ್ತಿಕನಾಗಿರುವ ಸಾಧ್ಯತೆಯಿದೆ ಎಂಬುದನ್ನು ಸೂಚಿಸುತ್ತದೆ. ಇಲ್ಲದಿದ್ದರೆ ಅವನು 'ಲೋಕಾಯತ'ದ ಗಾಢವಾದ ಪ್ರಭಾವಕ್ಕೆ ಒಳಗಾಗಿರುವುದೂ ಖಂಡಿತ. ನೋಡಿ :

**ವಿದೂಷಕ :** ವಿಶ್ವಾಮಿತ್ರರಿಗೆ ಎರಡು ಮುಖಗಳಂತೆ, ನಾಲ್ಕು ಕೈಗಳಂತೆ, ಪೃಷ್ಠವೇ ಇಲ್ಲವಂತೆ. ಮುಖವೇ ಎರಡೂ ಕಡೆಗಳಲ್ಲೂ ಕಾಣಬರುವುದಂತೆ.

ಈ ವಿಡಂಬನೆ ಹೀಗೆ ಮುಂದುವರಿಯುತ್ತದೆ :

**ಗೋಪಿಲ :** ವಿಶ್ವಾಮಿತ್ರರನ್ನು ನೀನು ನೋಡಿದ್ದೀಯೇನು ?

**ವಿದೂಷಕ :** ಅರೇ ಮೂರ್ಖ, ಕಂಡಿಲ್ಲ, ಕೇಳಿದ್ದೇನೆ. ಪ್ರತ್ಯಕ್ಷವಾಗಿ ಕಂಡದ್ದಕ್ಕಿಂತ, ಪರೋಕ್ಷವಾಗಿ ಕೇಳಿದ್ದು ಹೆಚ್ಚು ಪ್ರಮಾಣವುಳ್ಳದ್ದೆಂದು ಕೇಳಿಲ್ಲವೇ ?

'ಪ್ರಮಾಣ'ಕ್ಕೆ ಪ್ರತ್ಯಕ್ಷವೋ, ಪರೋಕ್ಷವೋ;ಕಂಡದ್ದೋ, ಕೇಳಿದ್ದೋ ಕಾರಣವೆಂಬ ತತ್ತ್ವಶಾಸ್ತ್ರೀಯ ಪ್ರಶ್ನೆಯನ್ನು ವಿದೂಷಕನ ಮೂಲಕ ವಿಡಂಬಿಸುತ್ತಿರುವುದು ಸ್ಪಷ್ಟವಿದೆ. ಬಹುಶಃ ಲೇಖಕ ಅಧ್ಯಾತ್ಮವಾದೀ ತತ್ತ್ವಶಾಸ್ತ್ರದ ಆಭಾಸವನ್ನು ಹೀಗೆ ಅಪಹಾಸ್ಯ ಮಾಡುತ್ತಿದ್ದಾನೆ. ಇದಕ್ಕಾಗಿ 'ಪ್ರವೇಶಕ' ಎಂಬ ಈ ಭಾಗವನ್ನು ಚೆನ್ನಾಗಿ ಬಳಸಿಕೊಳ್ಳುತ್ತಿದ್ದಾನೆ. ನಂತರ ಈ ಅಂಕದಲ್ಲಿ ವಿಶ್ವಾಮಿತ್ರ ಯಜ್ಞರಕ್ಷೆಯ ನೆವದಲ್ಲಿ ರಾಮಾದಿಗಳನ್ನು ತನ್ನ ಆಶ್ರಮಕ್ಕೆ ಕರೆದೊಯ್ಯುವುದಕ್ಕೆ ದಶರಥನನ್ನು ಒಪ್ಪಿಸುವ ಸುದೀರ್ಘವಾದ ಭಾಗವಿದೆ. ಪರಸ್ಪರರನ್ನು ಹೊಗಳುವ, ಒಣ ಪ್ರತಿಷ್ಠೆಯ ಆಡಂಬರವೇ ಇವರ ವರ್ತನೆಯಲ್ಲಿ ಕಂಡುಬರುತ್ತದೆ.

ವಿಶ್ವಾಮಿತ್ರ ರಾಮನನ್ನು, ವಶಿಷ್ಠನಿಂದ ಯಾವ ಯಾವ ಶಾಸ್ತ್ರಗಳನ್ನು ಕಲಿತಿರಿ ಎಂದು ಕೇಳಿದಾಗ ರಾಮ ಆ ಕಾಲದ ಶೋಷಕ ವರ್ಗವು ಕಲಿಯುತ್ತಿದ್ದ ಶಿಕ್ಷಣದ ಸಿಲೆಬಸ್‌ನ್ನು ಒಪ್ಪಿಸುವನು. ಅದು : ಗುರುಗಳಲ್ಲಿ ವಿನಯ (ಈ ಸಂಗತಿಯ ಕುರಿತು ಅದ್ಭುತವಾದ ವಿಶ್ಲೇಷಣೆ ೫ನೇ ಅಂಕದ ಪ್ರಾರಂಭದಲ್ಲಿ ಬರುತ್ತದೆ), ಮಿತ್ರರಲ್ಲಿ ಪ್ರೀತಿ, ದೀನರಲ್ಲಿ ದಯೆ, ಶತ್ರುವಿನಲ್ಲಿ

ನಿರ್ವಯಿತ್ವ. ನಾಲ್ಕು ವೇದಗಳು, ಸೂತ್ರಾರ್ಥ ಸಹಿತ ವ್ಯಾಕರಣ, ಆರ್ಷಪದ ನಿರ್ವಚನ, ಜ್ಯೋತಿಷ, ಪತಂಜಲಿಯ ಯೋಗಶಾಸ್ತ್ರ, ಮನುವಿನ ಆಚಾರಶಾಸ್ತ್ರ, ೨೪ ವ್ಯವಹಾರ ನಿರ್ಣಯಗಳನ್ನು ಒಳಗೊಂಡ ವಾಶಿಷ್ಠರಾಜಧರ್ಮಶಾಸ್ತ್ರ, ಮೇಧಾತಿಥಿಯ ನ್ಯಾಯಶಾಸ್ತ್ರ, ಕಾಶಕೃತ್ಸ್ನನ ಮೀಮಾಂಸಾಶಾಸ್ತ್ರ, ನಿತ್ಯೋಪಯೋಗಿಗಳಾದ ರಜಪರೀಕ್ಷೆ, ಅಶ್ವಪರೀಕ್ಷೆ, ರತ್ನಪರೀಕ್ಷೆ, ಶಕುನಶಾಸ್ತ್ರ, ಕಾವ್ಯಕಲೆ.

ಅಂತೂ ಜೃಂಭಕಾಸ್ತ್ರ ಮತ್ತು ಬ್ರಹ್ಮಾಸ್ತ್ರಗಳನ್ನು ಕಲಿಸುವ ಆಶೆ ಹಚ್ಚಿ ದಶರಥನನ್ನು ಒಪ್ಪಿಸುತ್ತಾನೆ ವಿಶ್ವಾಮಿತ್ರ. ಅನುಭವವಿಲ್ಲದ ವಿದ್ಯೆ ಉಪಕಾರ ಮಾಡದು. ತುಪ್ಪ ಮೊಸರಿನಲ್ಲಿದ್ದರೂ ಅದು ಕಡೆಯದೇ ದೊರೆಯಲಾರದು, ಅದರಂತೆ ಶಿಕ್ಷಣದಲ್ಲಿ ಪ್ರಯೋಗಾನುಭವದ ಅಗತ್ಯವಿದೆ ಎಂದು ಒತ್ತಿಹೇಳುತ್ತಾನೆ ಆತ. ಆದರೆ ಇದೂ ಕೂಡ ಶೋಷಕವರ್ಗಪರ ಅನುಭವವೇ ಆಗಿತ್ತೆನ್ನಲು ವಿಶ್ವಾಮಿತ್ರ ರಾಮಾದಿಗಳನ್ನು ಹಳ್ಳಿಗರ ಹತ್ತಿರ ಕರೆತಂದಾಗಿನ ಅನುಭವವೇ ಹೇಳುತ್ತದೆ.

ರಾಜರಿಂದ ರಕ್ಷಣೆ ಪಡೆಯುತ್ತಿದ್ದ ವರ್ಗಗಳೆಂದು ಗ್ರಾಮಸ್ಥರು, ರೈತರು, ಗೊಲ್ಲರು, ವರ್ತಕರು, ಸರಕುಸಾಗಾಣಿಕೆದಾರರನ್ನು ಹೇಳಿರುವುದೆಷ್ಟು ಸರಿ ? ರಾಕ್ಷಸರು ಬಂಗಾರ, ಧನವನ್ನು ಆಶಿಸದೇ, ಕೃಷಿಕರನ್ನು, ವರ್ತಕರನ್ನು ಹಿಂಸಿಸದೇ ತಪೋವನದ ತಾಪಸರನ್ನು ಮಾತ್ರ ಅಡ್ಡಿಮಾಡುತ್ತಾರೆಂದು ವಿಶ್ವಾಮಿತ್ರ ಹೇಳುವುದು ಕುತೂಹಲದ ವಿಷಯ. ರಾಕ್ಷಸರ ಹಿತಾಸಕ್ತಿಗೆ, ಅವರ ಸಿದ್ಧಾಂತಕ್ಕೆ ವಿರೋಧವಿದ್ದ ಋಷಿಗಳನ್ನಷ್ಟೇ ಅವರು ವಿರೋಧಿಸುತ್ತಿದ್ದರು ಎಂದಲ್ಲವೇ ಇದರ ಅರ್ಥ ?

ಐದನೇ ಅಂಕದ ಪ್ರಾರಂಭದಲ್ಲಿ ಬರುವ ಶಾಲಂಕಾಯನ, ಗಾಲವ, ತಾಮ್ರಾಯನರ ಪ್ರಸಂಗ ಇಡೀ ನಾಟಕದಲ್ಲೇ ಅಪರೂಪದ ಭಾಗವಾಗಿದೆ. ಇವರು ವಿಶ್ವಾಮಿತ್ರನ ಆಶ್ರಮದ ಬಡ ಬ್ರಾಹ್ಮಣ ಶಿಷ್ಯರು. ರಾಮ ಮೊದಲಾದವರ ಜತೆ ಓದುತ್ತಿರುವವರು ಎಂಬ ಕಲ್ಪನೆ ಮೂಡುವಂತಿದೆ. ಅಂದಿನ ಶಿಕ್ಷಣ ವ್ಯವಸ್ಥೆಯಲ್ಲಿ ಆಳುವ ವರ್ಗಕ್ಕಿದ್ದ ಅನುಕೂಲತೆ, ಬಡ ಬ್ರಾಹ್ಮಣರಿಗಿದ್ದ ಹೀನ ಸ್ಥಿತಿಯನ್ನು ಈ ಪ್ರಸಂಗ ಬಿಚ್ಚಿಡುತ್ತದೆ. ಲೇಖಕ ಬಹುಶಃ ಬಡತನದಲ್ಲೇ ಹುಟ್ಟಿ ಬೆಳೆದವನಿರಬೇಕು. ಹಾಗಾಗಿಯೆ ಶೋಷಿತರ ಪರವಾಗಿ, ಜನಪರ ಆಶಯಗಳನ್ನು ಪ್ರಕಟಪಡಿಸುತ್ತಿದ್ದಾನೆ.

ಗಾಲವ, ಶಾಲಂಕಾಯನರು ರಾಮನ ಬಲ, ವಿದ್ಯೆಗಳನ್ನು ಹೊಗಳುತ್ತಾರೆ. ಶಾಲಂಕಾಯನ, 'ವಿದ್ಯೆಯಲ್ಲಿಯೂ ಅವನು ನಮ್ಮೆಲ್ಲರನ್ನು ಮೀರಿಸಿದ್ದಾನೆ. ಹೀಗೆಂದು ಋಷಿಗಳೆಲ್ಲ ಅವನ ವಿದ್ಯೆಯನ್ನು ಕೊಂಡಾಡುತ್ತಾರೆ' ಎಂದಾಗ ತಾಮ್ರಾಯನ 'ಕೊಂಡಾಡುವುದಕ್ಕೇನಂತೆ ? ಅವನು ರಾಜನ ಮಗ. ಸದಾ ಹಿತವಾದ ಊಟ, ಸೇವಕರ ಪರಿಚರ್ಯೆ, ತಾಯಿ ತಂದೆಗಳ ಲಾಲನೆ ಪಾಲನೆ, ವಾಮಕ್ಷೇಮಕ್ಕೆ ವೈದ್ಯರಿದ್ದಾರೆ. ಗುರುಗಳನೇಕರು ಪ್ರೀತಿಯಿಂದ ಕಲಿಸಿದ್ದಾರೆ. ಅವನು ಬಹುವಾಗಿ ಕಲಿತದ್ದಿದ್ದರೆ ಏನಾಶ್ಚರ್ಯ ? ನಾವಾದರೋ ಜಡ್ಡಾದರೂ ಗುರುಸೇವೆ ಬಿಡುವಂತಿಲ್ಲ. ಬಿಕ್ಕೆ ಎತ್ತಬೇಕು. ಎಂದೋ, ಎಲ್ಲೋ ಸಿಕ್ಕಷ್ಟು ತಿಂದು ಬದುಕಬೇಕು. ಗುರುಗಳಿಗೆ ಹೆದರಬೇಕು. ಚಾಪೆ ಮೇಲೆ ಮಲಗಬೇಕು. ಅಧ್ಯಯನಕ್ಕೆ ನಮಗೆ ಸಿಗುವ ಕಾಲವೇ ಅಲ್ಪ. ಆದ್ದರಿಂದ ನಮ್ಮದು ಅಲ್ಪ ವಿದ್ಯೆಯಾದರೂ ಅವನ ಘ...

ವಿದ್ಯೆಗಿಂತ ಶ್ರೇಷ್ಠ. ಋಷಿಗಳೆಲ್ಲ ಅವನ ವಿದ್ಯೆ ಹೊಗಳುವುದಿಲ್ಲ, ರಾಜಪುತ್ರತ್ವವನ್ನು ಹೊಗಳುತ್ತಾರೆ.'

ಗುರುಕುಲಗಳಲ್ಲಿದ್ದ ವರ್ಗ ತಾರತಮ್ಯ, ಗುರುಗಳ ಪಕ್ಷಪಾತ ನೀತಿ, ಅಮಾನವೀಯ ಧೋರಣೆ, ಬಡ ವಿದ್ಯಾರ್ಥಿಗಳಿಗಿದ್ದ ತೊಂದರೆಗಳ ಬಗ್ಗೆ ಈ ಮಾತು ಗಮನ ಸೆಳೆಯುತ್ತವೆ. ಆದರೆ ಉಳಿದಿಬ್ಬರ ಪ್ರತಿಕ್ರಿಯೆ ಮೇಲ್ವರ್ಗಪರ ನಿಲುವಿನಿಂದ ಕೂಡಿರುವಂಥವು. ನೋಡಿ:

**ಗಾಲವ** : ಮೂರ್ಖ, ಗುರುದೂಷಣೆ ಕೂಡದು.

**ತಾಮ್ಯಾಯನ** : ನಿಜ ಹೇಳಿದರೆ ನಿಂದೆಯಾದೀತೆ ?

**ಶಾಲಂಕಾಯನ** : ಆದರೂ ಯಾವುದನ್ನು ಆಡಿದರೆ ಗುರುನಿಂದೆಯಾಗುವುದೋ ಅಂತಹ ಮಾತನ್ನು ಆಡಲೂ ಬಾರದು, ಕೇಳಲೂ ಬಾರದು. ಗುರುಗಳಾದವರು ವಿಚಾರ ಮಾಡದೇ ಏನನ್ನೂ ಮಾಡರು, ಆಡರು.

**ತಾಮ್ಯಾಯನ** : ಗುರುಗಳಿಗೆ ಬೇಕಾಗಿರುವುದು ಸ್ವಲಾಭ ಮಾತ್ರ. ಸದ್ಗುಣ ಬೇಡ.

**ಗಾಲವ** : ಮೂರ್ಖ, ನೀನು ನಾಸ್ತಿಕವಾದಿ. ನಾವು ಅದನ್ನು ಕೇಳುವುದಿಲ್ಲ.

**ತಾಮ್ಯಾಯನ** : ಸತ್ಯ ವಚನಕ್ಕೆ ಉತ್ತರ ಕೊಡಲಾರದವರು ಆ ಸತ್ಯ ವಚನವನ್ನು ನಾಸ್ತಿಕವಾದ ಎನ್ನುವುದು ಸಹಜ.

ವರ್ಗ ವೈರುದ್ಧ್ಯವನ್ನು ಭಾಸ ಎಷ್ಟು ಚೆನ್ನಾಗಿ ಚಿತ್ರಿಸಿದ್ದಾನೆ ! ರಾಜರ ಮಕ್ಕಳಿಗೆ ಇದ್ದ ವಿಶೇಷವಾದ ಸೌಲಭ್ಯ, ಸುಖ, ಸವಲತ್ತು ಅವರನ್ನು ಶ್ರೇಷ್ಠರನ್ನಾಗಿಸುವದರಲ್ಲಿ ಏನು ಸಂಶಯ ಎಂಬ ಕಟು ಸತ್ಯವನ್ನು ಭಾಸ ಮುಂದಿಡುತ್ತಿದ್ದಾನೆ. ಈ ಮಾತು ಇಂದಿಗೂ ಸತ್ಯವೇ. ಆಗ ಸತ್ಯ ಹೇಳುವಂತಿರಲಿಲ್ಲ, ಹೇಳಿದರೆ ನಾಸ್ತಿಕನೆಂಬ ಬಿರುದಿಗೆ ಪಕ್ಕಾಗಬೇಕಿತ್ತು. ನಿರ್ಭಯವಾಗಿ ತಾಮ್ಯಾಯನ ವಾಸ್ತವವನ್ನು ಹೊರಹಾಕುತ್ತಿದ್ದಾನೆ. ಆದರೆ ಉಳಿದಿಬ್ಬರಿಗೆ ವಿಪರೀತ ಭಯವಿದೆ. ಸತ್ಯದಲ್ಲಿ ಪಾಲ್ಗೊಳ್ಳುವುದಕ್ಕೆ ಅವರು ಹಿಂದೇಟು ಹಾಕುತ್ತಾರೆ. ನಾಸ್ತಿಕವಾದ ವಾಸ್ತವವನ್ನು ಸ್ಪಷ್ಟವಾಗಿ ನಿರೂಪಿಸುತ್ತಿತ್ತು. ಭಾಸ ಅದರ ಗುಣವನ್ನು ಇಲ್ಲಿ ಸೂಚ್ಯವಾಗಿ ತಿಳಿಸುತ್ತಿದ್ದಾನೆ. ನಾಸ್ತಿಕವಾದಕ್ಕೆ ಆಗ 'ಲೋಕಾಯತ' ಎಂಬ ಹೆಸರೂ ಇತ್ತು. ಅದು ಭೌತಿಕವಾದ. ಪಟ್ಟಭದ್ರ ವರ್ಗಗಳಿಗೆ ಇದರ ಬಗ್ಗೆ ಅಸಹನೆ, ಬದ್ಧ ದ್ವೇಷ, ಅಸಡ್ಡೆ ಇತ್ತು. ಏಕೆಂದರೆ ಅದು ದುಡಿಯುವ ಜನವರ್ಗದ ಸಿದ್ಧಾಂತವಾಗಿತ್ತು.

ಅಂದಿನ ಕಾಲದ ಬಡ ಮಕ್ಕಳ ವಿದ್ಯಾಭ್ಯಾಸ ಸ್ಥಿತಿಯನ್ನೇ ಹೋಲುತ್ತಿದೆ ಇಂದಿನ ಬಡ ಮಕ್ಕಳ ವಿದ್ಯಾಭ್ಯಾಸ ಸ್ಥಿತಿ. 'ಜಡ್ಡಾದರೂ ಗುರುಸೇವೆ ಬಿಡುವಂತಿಲ್ಲ. ಬಿಕ್ಕೆ ಎತ್ತಬೇಕು, ಚಾಪೆ ಮೇಲೆ ಮಲಗಬೇಕು' ಇಂಥ ವಿದ್ಯಾರ್ಥಿ ಜೀವನ ನಿಯಮಗಳು ಸಾರ್ವತ್ರಿಕವಾಗಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ವರ್ಗದ ಬಡಮಕ್ಕಳಿಗೆ ಮಾತ್ರ ಇದು ಕಾನೂನು. ಶೂದ್ರ ವರ್ಗದ ಮಕ್ಕಳಂತೂ ವಿದ್ಯೆ ಕಲಿಯುವ ಪ್ರಶ್ನೆಯೇ ಇರಲಿಲ್ಲ. ಆಳುವ ವರ್ಗ ಮತ್ತು ಪುರೋಹಿತಶಾಹಿ ವರ್ಗದ ಪರವಾಗಿದ್ದ ಮನುಸ್ಮೃತಿ ಹೀಗೆ ಹೇಳುತ್ತದೆ : 'ಗುರುವಿಗೆ ಅವಶ್ಯವಿದ್ದಷ್ಟು ನೀರು, ಹೂ, ಗೋಮಯ, ಮೃತ್ತಿಕಾ ಕುಶಗಳನ್ನು ತರಬೇಕು..., ಪ್ರತಿದಿನ ಭಿಕ್ಷಾಟನೆ ಮಾಡಬೇಕು.'

ಈ ಅಂಕದ ಕೊನೆಯ ಭಾಗದಲ್ಲಿ ವಿಶ್ವಾಮಿತ್ರ ರಾಮ, ಲಕ್ಷ್ಮಣರಿಗೆ ಹಳ್ಳಿಗಳನ್ನು, ಕೃಷಿಕರನ್ನು ತೋರಿಸುತ್ತ ಬರುವ ಸನ್ನಿವೇಶವಿದೆ. ಬಾಲಕರಾದ ಆ ರಾಜಕುಮಾರರ ಮುಗ್ಧ ಭಾವನೆಗಳನ್ನು ತೊಡೆದು ಹಾಕಿ ರಾಜಶಾಹಿಗೆ ಹೊಂದಿಕೊಳ್ಳುವಂತೆ ವ್ಯಾವಹಾರಿಕ ಶೋಷಕ ಬುದ್ಧಿಯನ್ನು ಬೆಳೆಸುವ ಕುತಂತ್ರವನ್ನು ಮಾಡುತ್ತಾನೆ ವಿಶ್ವಾಮಿತ್ರ. ಒಟ್ಟಾರೆ ಋಷಿಗಳು ಪ್ರಭುತ್ವಕ್ಕೆ ಪೂರಕವಾದ, ಪೋಷಕವಾದ, ಸೈದ್ಧಾಂತಿಕ ಬೆಂಬಲವನ್ನು ನೀಡುತ್ತಿದ್ದರು. ವಿಶ್ವಾಮಿತ್ರ ತನ್ನ ರಾಜಶಿಷ್ಯರಿಗೆ ಕೊಡುವ ಶಿಕ್ಷಣದ ಮತ್ತೊಂದು ಮಾದರಿಯನ್ನು ಭಾಸ ಬರೆಯುವುದು ಹೀಗೆ :

ರೈತರನ್ನು ವಿಶ್ವಾಮಿತ್ರ 'ಸದಯರು', 'ಅಲ್ಪ ಲಾಭದಲ್ಲೇ ತೃಪ್ತರು', 'ಸರ್ವ ಜೀವರ ಉಳಿವಿಗಿವರೆಯೆ ಮುಖ್ಯ ಕಾರಣರೆನಿಪರು' ಎಂದೂ; 'ಹೊಲವೇ ಕರ್ಮಭೂಮಿ ಇವರಿಗೆ, ಅಖಿಲ ವಿಶ್ವ ಮಡದಿಮಕ್ಕಳು' ಇತ್ಯಾದಿಯಾಗಿ ಹೊಗಳುತ್ತಾನೆ. 'ಬಹುಗುಣ ಸಂಪನ್ನರಾದರೂ ತಮ್ಮನ್ನು ಅಲ್ಪರೆಂದು ಭಾವಿಸಿಕೊಂಡ' ರೈತರನ್ನು ತನ್ನೊಡನೆ ಪಟ್ಟಣಕ್ಕೆ ಕರೆದೊಯ್ಯುವ ಇಚ್ಛೆಯನ್ನು ರಾಮ ವ್ಯಕ್ತಪಡಿಸಿದಾಗ ವಿಶ್ವಾಮಿತ್ರನ ನಿಜವಾದ ಹೂರಣ ಹೊರಬೀಳುತ್ತದೆ. ಇದುವೇ ರಾಮನಿಗೆ ಈತ ಕೊಡುವ 'ಶಿಕ್ಷಣ'.

ವಿಶ್ವಾಮಿತ್ರ : ಇವರು ಪಟ್ಟಣವಾಸಿಗಳಾದರೆ ಇವರ ಸುಗುಣಗಳೆಲ್ಲವೂ ಮಾಯವಾಗುತ್ತವೆ. ಇತ್ತ ಕೃಷಿಕರ್ಮವೂ ಇವರಿಗೆ ಮರೆತು ಹೋಗುತ್ತದೆ. ಇಲ್ಲಿ ತಮ್ಮನ್ನು ಅಲ್ಪರೆಂದುಕೊಂಡವರೇ ಅಲ್ಲಿ ದಿನಗಳೆದಂತೆ ರಾಜಾದಿಗಳು ಕೂಡ ತಮಗಿಂತ ಕಡಿಮೆ ಎಂದು ತಿಳಿದುಕೊಂಡು ಬಿಡುತ್ತಾರೆ. ಇಲ್ಲಿ ಅತಿಥಿ ಸೇವಾಸಕ್ತರು, ಅಲ್ಲಿ ತಾವೇ ಎಲ್ಲರಿಗಿಂತ ಪೂಜೆಗೆ ಅರ್ಹರಾದವರು ಎಂದು ಭಾವಿಸಿಕೊಳ್ಳುತ್ತಾರೆ. ಇವರಲ್ಲಿ ಸಹ ಮುಂದಕ್ಕೆ ನಗರದೋಷಗಳೆಲ್ಲವೂ ತುಂಬಿಕೊಳ್ಳುತ್ತವೆ. ಯಾವುದು ಯಾರಿಗೆ ಸಹಜ ನಿವಾಸವೋ, ಸಹಜ ಕರ್ಮವೋ ಅವರಿಗೆ ಆ ನಿವಾಸ, ಆ ಕರ್ಮಗಳಲ್ಲಿಯೇ ಗುಣ ದೊರೆಯುತ್ತದೆ. ಇಲ್ಲಿಯೇ ಇರುತ್ತ ಕರ್ಮತ್ಯಾಗಿಗಳಾಗದೇ, ದುರಾಸೆಗೆ ಬೀಳದೇ ಇದ್ದರೆ ಮನ್ನಣೆ ದೊರೆಯುತ್ತದೆ. ರಾಜನಾಗಲೀ, ಪೌರನಾಗಲೀ ಇವರನ್ನು ಕಡೆಗಣಿಸದಂತೆ ನೀವೂ, ಮಹಾರಾಜನೂ ಯತ್ನಿಸಿದರಾಯ್ತು.

ಇದನ್ನೆಲ್ಲ ಕೇಳಿದ ರಾಮ, 'ಭಗವನ್, ತಾವು ಪರಿಣಾಮದರ್ಶಿಗಳು, ಎಲ್ಲರಿಗೂ ನಿರಂತರ ಸೌಖ್ಯವನ್ನು ಕೋರುತ್ತಿರುವಿರಿ' ಎಂದು ಸ್ತುತಿಸುತ್ತಾನೆ. (ಇಂಥ 'ರಾಮರಾಜ್ಯ' ವನ್ನೇ ಗಾಂಧೀ ಪುನರ್‌ಸ್ಥಾಪಿಸಲು ಯೋಚಿಸಿದ್ದು.) ಶೋಷಕರು, ಮಡಿಯುವ ಜನರನ್ನು ಹೇಗೆ ನೋಡಬೇಕು, ನಡೆಸಿಕೊಳ್ಳಬೇಕು ಎಂಬುದನ್ನು ಕಲಿಸುತ್ತಿರುವ ಗುರು ವಿಶ್ವಾಮಿತ್ರನ ಕುಹಕ, ಕುತಂತ್ರ, ಕುಟಿಲಗಳು ಇಲ್ಲಿ ಎಷ್ಟು ಚೆನ್ನಾಗಿ ವ್ಯಕ್ತವಾಗಿವೆ ನೋಡಿ. ಮಡಿಯುವ ಜನಕ್ಕೆ ನಗರದ ವಾಸನೆ ಹಚ್ಚಬಾರದು, ವಿದ್ಯೆಯ ರುಚಿ ತೋರಿಸಬಾರದು ! ಪಟ್ಟಣದ ಗುಟ್ಟು ಅವರಿಗೆ ತಿಳಿದರೆ ಶೋಷಕ ವರ್ಗದ ವಿರುದ್ಧ ತಿರುಗಿಬೀಳುತ್ತಾರೆ. ಇವರ ಬಗ್ಗೆ ರಾಜ ಎಚ್ಚರಿರಬೇಕು. ವ್ಯವಸ್ಥೆಗೆ ಧಕ್ಕೆ ಬರದಂತೆ ಆಯಾ ಜಾತಿಜನ ತಮ್ಮ ತಮ್ಮ ಕೆಲಸ ಮಾಡಿಕೊಂಡಿದ್ದರೆ ಸಾಕು. ಇದೆಲ್ಲವೂ ಧ್ವನಿತವಾಗುತ್ತಿವೆ ವಿಶ್ವಾಮಿತ್ರನ ಮಾತಿನಲ್ಲಿ.

ಹಳ್ಳಿಯ ಒಬ್ಬ ಮುದುಕಿಯ ಜತೆ 'ಇಂಟರ್‌ವ್ಯೂ' ಕೊಡಿಸುವ ವಿಶ್ವಾಮಿತ್ರ ಹಳ್ಳಿಗರ ದಯಾಸ್ವಭಾವ, ಅಪಕಾರಿಗಳ ವಿಷಯದಲ್ಲೂ ಕುಪಿತರಾಗದ ಅವರ ಗುಣವನ್ನ

ಹೊಗಳುವನು. ರಾಮ 'ಇವರದು ದೇವಸದೃಶವಾದ ಮನಸ್ಸು' ಎನ್ನುವನು. ಕೊನೆಗೆ 'ಕುಮಾರರೇ, ನಿಮಗೆ ಕೃಷಿಕರನ್ನು ಏಕೆ ತೋರಿಸಿದೆ ತಿಳಿಯಿತೇ ?' ಎಂದು ವಿಶ್ವಾಮಿತ್ರನ ಪ್ರಶ್ನೆ. ಲಕ್ಷ್ಮಣ 'ಇವರು ಕಡಿಮೆ ಸಿರಿಯಿಂದಲೇ ಹೆಚ್ಚು ತೃಪ್ತರು' ಎಂಬುದನ್ನು ತಿಳಿಸುವುದಕ್ಕಾಗಿ, ಎಂದರೆ ರಾಮ 'ನಮಗೆ ವ್ಯವಹಾರ ಬುದ್ಧಿಯನ್ನು ಬೆಳೆಸುವುದಕ್ಕಾಗಿ. ನಾವು ನೋಡದಿದ್ದರೆ ಇವರ ವ್ಯವಹಾರಗಳನ್ನು ನಾವು ಸರಿಯಾಗಿ ನಿರ್ಣಯಿಸುವುದು ಅಶಕ್ಯ. ಪೌರರು ತಮ್ಮ ತಮ್ಮ ಪಕ್ಷಗಳನ್ನು ಚಾತುರ್ಯದಿಂದ ಸಾಧಿಸಿಕೊಳ್ಳಲು ಸಮರ್ಥರಿರುತ್ತಾರೆ. ಇವರ ವರ್ತನೆಗಳನ್ನು ಅರಿತರೆ ಮಾತ್ರ ಇವರ ವ್ಯವಹಾರಗಳನ್ನು ಸರಿಯಾಗಿ ನಿರ್ಣಯಿಸಲು ಸಾಧ್ಯವಾಗುತ್ತದೆ' ಎನ್ನುತ್ತಾನೆ. ವಿಶ್ವಾಮಿತ್ರ ರಾಮ ಸರಿಯಾಗಿ ಗ್ರಹಿಸಿದ್ದಾನೆ ಎಂದು ಮಂಗಳ ಹಾಡುತ್ತಾನೆ.

ಅಸ್ತ್ರ ವಿದ್ಯೆ, ವ್ಯವಹಾರ ವಿದ್ಯೆಗಳನ್ನು ಕಲಿಸಿದ ಈ ಋಷಿ ರಾಮನಿಗೆ ಹೆಂಡತಿಯನ್ನು ಒದಗಿಸಲು ಕೊನೆಗೆ ಏನೆಲ್ಲ ಕುಂಟಲಗಿತ್ತಿ ಕೆಲಸಕ್ಕಿಳಿಯುತ್ತಾನೆಂಬುದನ್ನು ನೋಡಿದರೆ ಋಷಿಗಳ ಬಗ್ಗೆ ಹೇಸಿಗೆ ಹುಟ್ಟುತ್ತದೆ. ಹೀಗೆ ಭಾಸ ಈ ನಾಟಕದ ಮೂಲಕ ಮಹತ್ವಪೂರ್ಣವಾದ ಚರ್ಚೆಗೆ ಇಂಬು ಮಾಡುತ್ತಿದ್ದಾನೆ. ಇಡೀ ಸಂಸ್ಕೃತ ನಾಟಕಕಾರರಲ್ಲೇ ತನ್ನ ವಿಭಿನ್ನವಾದ, ಅಪರೂಪದ ವ್ಯಕ್ತಿತ್ವವನ್ನು ತಿಳಿಯಪಡಿಸುತ್ತಿದ್ದಾನೆ.

● ● ಎಸ್. ಎಸ್. ಹಿರೇಮಠ, ಎ.ಡಿ.ಬಿ. ಕಾಲೇಜು, ಹರಪನಹಳ್ಳಿ - ೫೮೩ ೧೩೧

---

## ಅಯ್ದ ಕವಿತೆಗಳು — ಜಿ. ಪಿ. ಬಸವರಾಜು

### ೧. ಸುಡುತ್ತಾನೆ ಸೂರ್ಯ ಎಂದಿನ ಹಾಗೆ

ಎಗ್ಗಿಲ್ಲದೆ ಮೈಚಾಚಿದೆ ಬೆಳಗಿನ ಬಿಸಿಲು
ಎದೆ ಸೆಟೆದು ತಲೆ ಎತ್ತಿ ನಿಂತಿವೆ ಮರಗಿಡಗಳು
ರಸ್ತೆ ಬದಿ ಕುಳಿತವರು ಕಾಯುತ್ತಿದ್ದಾರೆ.
        ದಿನದ ಬುತ್ತಿ ಬದಿಯಲ್ಲಿ, ಕವಳ ಬಾಯಲ್ಲಿ
        ತುಟಿಮಧ್ಯೆ ಉರಿಯುತ್ತಿದೆ ಬೀಡಿ
        ಬೆಳಗಿನ ಸೂರ್ಯನ ಹಾಗೆ.
ಸೊಂಟಕ್ಕೆ ಸಿಕ್ಕಿಸಿದ ಸೆರಗು, ಹೆಗಲ ಮೇಲಿನ ವಲ್ಲಿ
ಬೆಳಗಿನ ಊಟದ ಸಂತೃಪ್ತಿ ಮುಖದಲ್ಲಿ
ಹರಟೆ ಚಾಚಿದೆ ಸೂರ್ಯನ ಕಿರಣಗಳ ಹಾಗೆ.
        ಇದೋ ಈಗ ಬರಬೇಕು ಅವನು
        ಕೆಲಸ ನಿರ್ಧರಿಸುವವನು, ಕೊಡುವವನು
        ಬರಲಿ ಬೇಕಾದ ಹಾಗೆ; ದಿನದ ಸೂರ್ಯನ ಹಾಗೆ.
ದುಡಿಯುವ ರಟ್ಟೆಗಳು, ಉಣ್ಣುವ ಹೊಟ್ಟೆಗಳು
ನಾಳೆ ನಾಳೆಗೆ ಇಂದು ಇಂದಿಗೆ
ಸುಡುತ್ತಾನೆ ಸೂರ್ಯ ಎಂದಿನ ಹಾಗೆ.

## ೨. ನೂರಾರು ಚಿಟ್ಟೆ

ಹಾರಿ ಬಂದು
ಮೈಮೇಲೆ ಕುಳಿತ
ಚಿಟ್ಟೆ.

ಮಲಗಿದ್ದವಳು ಥಟ್ಟನೆದ್ದಂತೆ
ಬೆಚ್ಚಿಬಿದ್ದ
ತಾಯಿಯ ಕಂಡು
ನಕ್ಕಳು ಮಗಳು.

ಚಿಟ್ಟೆಯ ಬಣ್ಣ
ರೆಕ್ಕೆಯ ಮಾಟ
ರಂಗು ರಂಗಿನ
ಚಿತ್ರ ಚಿತ್ತಾರ.

ಮೋಹಕ ಕಣ್ಣುಗಳಿಂದ ನೋಡುತ್ತ
ಬೆರಗಿನಲಿ ಮೈಮರೆತ
ಮಗಳ ಕಂಡು
ತಾನೂ ಮೈಮರೆತ ತಾಯಿ.

ಹಗುರಾಗಿ ಪಾದ ಊರಿದರು
ಅದರ ಗುಳುಗುಳಿಗೆ
ಕಚಗುಳಿಗೆ
ಬಿಚ್ಚಿದಳು ತಾಯಿ;

ಯಾವುದೋ ನೆನಪು
ಯಾವುದೋ ಕನಸು
ಎಂಥದೋ ಭಾವ;

ಕಾಮಿ ಬೆಕ್ಕಿನ ಕಳ್ಳ
ಹೆಜ್ಜೆಗಳು ಮೈತುಂಬ;
ಚಡಪಡಿಸಿದಳು ತಾಯಿ.

ಬೆರಳು ಸೋಂಕಿದರೂ
ಈ ಚಿಟ್ಟೆ
ಸತ್ತುಹೋದೀತೆಂದು
ಹೆದರಿ,
ಮಮತೆಯಲಿ
ಹಗುರಾಗಿ ಬಾಯಿಂದ
ಗಾಳಿಹಾಕಿ
ಚಿಟ್ಟೆಯ ಸಾಗಿಸಲು
ನೋಡಿದಳು.

ಮಗಳದು ಮಾಯಾ ಲೋಕ
ಚಿಟ್ಟೆಗೆ
ಇನ್ನಷ್ಟು ಬಣ್ಣ ಬಳಿದು
ಚಿತ್ತಾರ ಮೂಡಿಸಿ
ತನಗೂ ರೆಕ್ಕೆ ಹಚ್ಚಿಕೊಂಡು
ಗಾಳಿಯಲ್ಲಿ ತೇಲಾಡಿದಳು,
ಹರೆಯಕ್ಕೆ ಹೊಸ ಭಾಷ್ಯ ಬರೆದಳು.

ಗಾಳಿ ತುಂಬ ಚಿಟ್ಟೆ
ಕಣ್ಣುಗಳ ತುಂಬ ಚಿಟ್ಟೆ
ಕನಸುಗಳ ತುಂಬ ಚಿಟ್ಟೆ
ಮನಸುಗಳ ತುಂಬ ಚಿಟ್ಟೆ
ನೆಲ-ಮುಗಿಲುಗಳ ತುಂಬ ಚಿಟ್ಟೆ;

ಆ ಚಿಟ್ಟೆಗಳ ಕಂಡು
ಆ ಬಣ್ಣಗಳ ಕಂಡು
ಲೋಕ ಲೋಕವೇ ಝಲ್ಲೆನಿಸಿತು!

ಆಹಾ!
ಆ ಮಗಳು
ಆ ತಾಯಿ!
ಆ ಚಿಟ್ಟೆ
ಆ ಬಟ್ಟೆ!

## ೩. ಕರೆಯುತ್ತೀಯ ಈಗವಳ?

ನಿನ್ನ ಸುತ್ತ ಬೇಲಿ ಬಿಗಿದು
ಕಾವಲು ಕೂತವಳನ್ನು
'ಚಂಡಿ' ಎಂದು ಕರೆದವನು
ನೀನು.

ಅದೇ ಬೇಲಿಯೊಳಗೆ
ಅವಳು
ಉಸಿರು ಬೆಳೆಸಿದ್ದಳು
ಹಕ್ಕಿ ಕರೆದಿದ್ದಳು
ಹೂವು ಅರಳಿಸಿದ್ದಳು
ದುಂಬಿ ಹಾರಿಸಿದ್ದಳು
ಅಲ್ಲಿಯೇ
ಋತುಚಕ್ರ ತಿರುಗಿಸಿ
ಚಂದ್ರ ಸೂರ್ಯರ ತಂದು
ಸಂಜೆ ಮುಂಜಾನೆಗಳ ಬರೆದು
ನಿನ್ನ ಅರಳಿಸಿ
ತಾನೂ ಘಮಘಮಿಸಿ
ಬದುಕ ಸಂಭ್ರಮಿಸಿದ್ದಳು.

ಈಗವಳನ್ನು ಕರೆಯುತ್ತೀಯ?–
ಅವಳು ಹೊರಟು ಹೋಗಿದ್ದಾಳೆ
ನಿನ್ನ ಬಿಟ್ಟು;

ತಾನು ಉತ್ತು ಬಿತ್ತಿ
ಬೆಳೆದ ಭೂಮಿ ಬಿಟ್ಟು
ಆಕಾಶ ಬಿಟ್ಟು
ಸೂರ್ಯ ಚಂದ್ರರ ಬಿಟ್ಟು.

ಅವಳು ಬೆಳೆಸಿದ
ಬೇಲಿಯಲ್ಲೂ
ಹೂಗಳರಳಿವೆ
ಬಣ್ಣ ಬಣ್ಣ
ಸುತ್ತೆಲ್ಲ
ಸುವಾಸನೆ ಹರಡಿದೆ
ಘಮಘಮ.

ಕರೆಯುತ್ತೀಯ
ನೀನವಳ ಈಗ,
ದೂರ ಹೋಗಿದ್ದಾಳೆ
ಅವಳು
ಮತ್ತೊಂದು ಭೂಮಿ
ಮತ್ತೊಂದು ಆಕಾಶ
ಹುಡುಕಿ.

## ೪. ಬರಿಯ ಗೆರೆ

೧

ಗದ್ದಲದ ಶಬ್ದಗಳನ್ನು ಅಲ್ಲೇ ನಿಲ್ಲಿಸಿ
ಸದ್ದಿಲ್ಲದ ಭಾವಗಳನ್ನು ಒಳ ಕರೆಯುತ್ತೇನೆ

ಆಕಾಶವ ಅತ್ತತ್ತ ಸರಿಸಿ
ಭೂಮಿಯ ಇತ್ತಿತ್ತ ತಂದುಕೊಳ್ಳುತ್ತೇನೆ

ಹಣ್ಣೆಲೆಯ ತಿರಸ್ಕರಿಸಿ
ಚಿಗುರೆಲೆಯ ಗೌರವಿಸುತ್ತೇನೆ

ಕತ್ತಲೆಯ ಜರಿದು
ಚುಕ್ಕಿಗಳ ಮೆರೆಸುತ್ತೇನೆ.

೨

ಮೌನದ ಹುಟ್ಟು
ಶಬ್ದದ ನಡುವಿನ ಜಾಗದಲ್ಲಿ

ಭೂಮಿಯ ಇರವು
ಆಕಾಶದ ಮಧ್ಯವಲ್ಲೆ

ಚಿಗುರು ಕಾಲಚಕ್ರದ
ತಿರುವಿನಲ್ಲಿ ಹಣ್ಣೆಲೆ

ಚುಕ್ಕಿಗಳ ದರ್ಶನ
ಕತ್ತಲೆಯ ಅಸ್ತಿತ್ವದಲ್ಲೇ

೩

ಒಂದರೊಳಗೊಂದು;

ಅದು ಮೊದಲು
ಇದು ಆಮೇಲೆ; ಬೇರೆ
ಎಂಬುದು
ಬರಿಯ ಗೆರೆ.

೫. ಬೆಳಗು

ಮಂಜು ಹನಿಯ ಮುತ್ತಿಗೆ
ಎಲೆ ಎಲೆಯ ಬೊಗಸೆಯೊಡ್ಡಿ
ತಂಗಾಳಿಗೆ ಬೆತ್ತಲೆಯ ಮೈಯೊಡ್ಡಿ
ಬೈರಾಗಿ ಮರ ಕರೆಯುತ್ತುದೆ
ಬಾನಂಗಳದಿಂದ ಇಳಿಯುವ
ಬಂಗಾರ ಕಿರಣಗಳನ್ನು.

ಆಹಾ!
ಇನ್ನು ಇಬ್ಬನಿಯಂತೆ
ಕರಗುವುದು ಅಹಂಕಾರ

ಕಾವಳದ ಕತ್ತಲೆಯಲ್ಲಿ
ಜೀರುಂಡೆ ಶ್ರುತಿಯಲ್ಲಿ
ಹಕ್ಕಿ ಗುಟುಕಿನ ಎಚ್ಚರದಲ್ಲಿ
ಒಂಟಿ ಕಾಲಿನ ಧ್ಯಾನದಲ್ಲಿ
ರಾತ್ರಿ ಕಳೆದು
ಬೆಳಗು ಇಳಿದು
ಎದೆಯೆಂಬೋ ಎದೆಯಲ್ಲಿ
ಝುಗ್ಗನೆ ಬೆಳಕು.

ಆಹಾ!
ಇನ್ನು ಹಾರಬಹುದು
ರೆಕ್ಕೆ ಬಿಚ್ಚಿ
ಬಾನ ತುಂಬ.

● ● ಜಿ. ಪಿ. ಬಸವರಾಜು
# ೧೦, ರಂಗರಾವ್ ಕಾಲೋನಿ,
ವಾಸವಿ ಲೇಔಟ್, ರಾಮಕೃಷ್ಣನಗರ,
ಕೆ ಬ್ಲಾಕ್, ಮೈಸೂರು-೨೩

# ಬಿ. ವಿ. ಕಾರಂತರ ಕೃತಿಗಳು ಮತ್ತು ಇಂದಿನ ರಂಗಪ್ರಪಂಚ

## ಎ. ಆರ್. ನಾಗಭೂಷಣ

ಬಿ.ವಿ.ಕಾರಂತರು ಭಾರತೀಯ ರಂಗಭೂಮಿಗೆ, ವಿಶೇಷವಾಗಿ ಕನ್ನಡ ರಂಗಭೂಮಿಗೆ ನೀಡಿದ ಹೊಸ ದಿಕ್ಕಿನ ಬಗ್ಗೆ ನಮ್ಮಲ್ಲಿ ಸ್ವಲ್ಪ ಮಟ್ಟಿನ ಚರ್ಚೆ ನಡೆದಿದೆ. ಅವರು ಕಾಣಿಸಿದ ಹೊಸ ಹೊಳಹುಗಳು, ವಿಸ್ತರಿಸಿದ ಸಾಧ್ಯತೆಗಳು ಮತ್ತು ಅನ್ವೇಷಿಸಿದ ನವೀನ ಶೈಲಿ ಎಲ್ಲವೂ ಈಗಾಗಲೇ ನಮ್ಮ ರಂಗಭೂಮಿಯ ಒಂದು ಭಾಗವಾಗಿದೆ. ಈ ಪರಿಚಿತ ಹಾದಿಯಲ್ಲಿ ಮತ್ತೆ ಹೆಜ್ಜೆ ಹಾಕುವುದರಿಂದ ಹೆಚ್ಚು ಪ್ರಯೋಜನವಿಲ್ಲ ಎಂದು ನನ್ನ ನಂಬಿಕೆ.

ಕಾರಂತರ ವೈಯಕ್ತಿಕ ಬದುಕು ಮತ್ತು ವ್ಯಕ್ತಿತ್ವಗಳಿಂದ ನಮ್ಮಲ್ಲಿ ನೂರಾರು ಜನ ಆಕರ್ಷಿತರಾಗಿದ್ದಾರೆ. ಅವರ ಬೊಹೆಮಿಯನ್ ಜೀವನಕ್ರಮ ಮತ್ತು ವರ್ಣರಂಜಿತ ಅಭ್ಯಾಸಗಳ ಬಗ್ಗೆ ಮಾರುಹೋಗಿದ್ದಾರೆ. ಇದು ಅಪರಾಧವೇನೂ ಅಲ್ಲ. ಅವರು ನಮ್ಮ ರಂಗಭೂಮಿಯ ಹಿರಿಯ ಚೇತನವಾದ್ದರಿಂದ ಇದು ಸಹಜವಾದುದೇ.

ಆದರೆ ಸಮಸ್ಯೆ ಏನೆಂದರೆ ನಮ್ಮ ಮನಸ್ಸು ಇಲ್ಲಿಯೇ ನಿಂತುಬಿಟ್ಟಿದೆ. ನಿಜವಾಗಿ ನಾವು ಚಿಂತಿಸಬೇಕಾದದ್ದು ಅವರ ರಂಗಕೃತಿಗಳ ಬಗ್ಗೆ; ಅವುಗಳಲ್ಲಿ ನೇರವಾಗಿ ಹಾಗೂ ಸೂಚ್ಯವಾಗಿ ವ್ಯಕ್ತವಾಗಿರುವ ಅವರ ನಿಲುವುಗಳ ಬಗ್ಗೆ. ವಿಷಾದದ ಸಂಗತಿ ಎಂದರೆ ಇಂತಹ ಕೆಲಸ ನಮ್ಮಲ್ಲಿ ಹೆಚ್ಚಾಗಿ ಆಗಿಯೇ ಇಲ್ಲ. ಇದಕ್ಕೆ ಎರಡು ಕಾರಣಗಳಿವೆ ಅನ್ನಿಸುತ್ತದೆ. ಒಂದು, ರಂಗಭೂಮಿಯ ಸ್ವರೂಪ. ಎರಡು, ಗಂಭೀರ ಪ್ರೇಕ್ಷಕರಾಗಿ ನಮ್ಮಲ್ಲಿ ಇರುವ ಕೊರತೆ. ಒಂದು ಕಾದಂಬರಿಯನ್ನೋ ಚಿತ್ರವನ್ನೋ ಶಿಲ್ಪವನ್ನೋ ನಾವು ವಿವರವಾಗಿ ಚರ್ಚಿಸಲು ಸಾಧ್ಯ. ಅವು ನಮ್ಮ ಕಣ್ಣ ಮುಂದೆಯೇ ಮೂರ್ತವಾಗಿ ಇರುವುದರಿಂದ ಅವುಗಳ ವಿವರಗಳನ್ನು ಪರಿಶೀಲಿಸಲು ಆಧಾರವಿರುತ್ತದೆ. ಪುನಃ ಪುನಃ ಅವುಗಳಿಗೆ ಹಿಂದಿರುಗುತ್ತಾ ಅವನ್ನು ಅವಲೋಕಿಸುತ್ತಾ ಉದಾಹರಣೆಗಳನ್ನು ಹೆಕ್ಕಿಕೊಂಡು ಚರ್ಚಿಸುವುದಕ್ಕೆ ಅವಕಾಶವಿರುತ್ತದೆ. ಆದರೆ ಒಂದು ರಂಗಪ್ರಯೋಗದ ಬಗ್ಗೆ ಹೀಗೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಇದಕ್ಕೆ ಚಿರವಾದ ರೂಪವಿಲ್ಲ. ಈ ಬಗೆಯ ಜಂಗಮ ರೂಪವನ್ನು ರಂಗಭೂಮಿಯ ವೈಶಿಷ್ಟ್ಯವೆಂದು ತಿಳಿಯಬೇಕೇ ಹೊರತು ಕೊರತೆ ಎಂದು ಭಾವಿಸಬಾರದು. ಎರಡನೆಯ ಕಾರಣ ಇನ್ನೂ ಮುಖ್ಯವಾದದ್ದು. ಒಂದು ರಂಗಕೃತಿಯನ್ನು ಸಮಗ್ರವಾಗಿ ಚರ್ಚಿಸಲು ಬೇಕಾದ ಪೂರ್ವ ಸಿದ್ಧತೆ ನಮ್ಮಲ್ಲಿ ಬಹುತೇಕ ಜನರಿಗೆ ಇಲ್ಲ. ಅದನ್ನು ಪ್ರವೇಶಿಸುವ ಕ್ರಮ, ಗ್ರಹಿಸುವ ರೀತಿ ಮತ್ತು ವ್ಯಾಖ್ಯಾನಿಸಲು ಬೇಕಾದ ಮಾನದಂಡಗಳ ಬಗ್ಗೆ ಸಮರ್ಪಕವಾದ ತಿಳಿವಳಿಕೆ ಇಲ್ಲ. ಹೀಗಾಗಿ ಅದರ ಕಥೆಯನ್ನು ತೆಳುವಾಗಿ ಅರ್ಥ ಮಾಡಿಕೊಂಡು ತೃಪ್ತರಾಗಿ ಬಿಡುತ್ತೇವೆ. ಪ್ರಯೋಗದ ವಿವಿಧ ಅಂಗಗಳ ಬಗ್ಗೆ ಸಡಿಲವಾಗಿ ಮಾತುಗಳನ್ನಾಡುತ್ತೇವೆ, ದುರ್ಬಲರಾಗಿ ಬರೆಯುತ್ತೇವೆ. ಪತ್ರಿಕೆಗಳಲ್ಲಿ ಅಷ್ಟೇ ಅಲ್ಲ, ರಂಗಭೂಮಿಗೆ ಮೀಸಲಾದ ಜರ್ನಲ್‌ಗಳಲ್ಲಿಯೂ ಪ್ರಕಟವಾಗುವ ರಂಗವಿಮರ್ಶೆಗಳನ್ನು ಓದಿದರೆ ತುಂಬ ಅತೃಪ್ತಿಯಾಗುತ್ತದೆ.

ಕಾರಂತರು ತೀರಿಕೊಂಡು ಒಂದು ವರ್ಷ ಕಳೆದಿರುವ ಈ ಸಂದರ್ಭದಲ್ಲಿ ಈ ಎಲ್ಲ ವಿಷಯಗಳ ಬಗ್ಗೆ ಮನನ ಮಾಡುವುದು ಅತ್ಯಾವಶ್ಯಕ. ಅವರ ರಂಗಕೃತಿಗಳನ್ನು ಕುರಿತು ಗಂಭೀರವಾದ ಚರ್ಚೆಯನ್ನು ತುರ್ತಾಗಿ ಪ್ರಾರಂಭಿಸಬೇಕು. ಅವರ 'ಹಯವದನ', 'ಈಡಿಪಸ್', 'ಪಂಜರಶಾಲೆ', 'ಸತ್ತವರ ನೆರಳು', 'ಬರ್ನಮ್‌ವನ', 'ಜೋಕುಮಾರಸ್ವಾಮಿ', 'ಗೋಕುಲ ನಿರ್ಗಮನ', 'ಮೀಡಿಯಾ', 'ಮಾಲವಿಕಾಗ್ನಿಮಿತ್ರ', 'ಕೇಳು ಜನಮೇಜಯ', 'ಸ್ಕಂದಗುಪ್ತ', 'ಘಾಸೀರಾಂ ಕೊತ್ವಾಲ್', 'ಏವಂ ಇಂದ್ರಜಿತ್' ಇಂತಹ ಅವರ ಕೃತಿಗಳು ಮಹತ್ವವಾದವು ಎಂಬುದನ್ನು ನಾವು ಹೇಳುತ್ತಾ ಬಂದಿದ್ದೇವೆ. ಆದರೆ ಅವು ಏಕೆ ಮಹತ್ತರವಾದವು ಎಂಬುದರ ಬಗ್ಗೆ ಸಾಧಾರವಾಗಿ, ಆಳವಾಗಿ ಚಿಂತಿಸಿಲ್ಲ. ಜಾನಪದೀಯ ಶೈಲಿಯಿಂದ ಗಮನ ಸೆಳೆದಿವೆಯೇ, ಪ್ರದರ್ಶನ ಮೌಲ್ಯಗಳಿಂದ ಮುಖ್ಯವಾಗಿವೆಯೇ, ಸಂಗೀತ-ನೃತ್ಯಗಳಿಂದ ಆಕರ್ಷಕವಾಗಿವೆಯೇ ಅಥವಾ ಅವುಗಳಲ್ಲಿ ಅಂತರ್ಗತವಾಗಿರುವ ಮಾನವೀಯ ನೆಲೆಗಳು ಮತ್ತು ಜೀವನದರ್ಶನ ಇವುಗಳಿಂದ ಗಹನವಾಗಿವೆಯೇ ಎಂಬುದು ನಮ್ಮ ಚಿಂತನೆಯ ಕೇಂದ್ರವಾಗಬೇಕು.

ಕಾರಂತರ ಕೃತಿಗಳಲ್ಲಿ ವ್ಯಕ್ತವಾಗಿರುವ ನಿಲುವುಗಳನ್ನು ಅಭ್ಯಾಸ ಮಾಡುವಾಗ ಮತ್ತೊಂದು ವಿಚಾರವನ್ನು ಕುರಿತು ಆಲೋಚನೆ ಮಾಡಬೇಕಾಗುತ್ತದೆ. ಅವರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಧೋರಣೆಗಳು ಏನು? ಯಾವುದೇ ಶ್ರೇಷ್ಠ ಕಲಾಕೃತಿ ಇನ್ನಿತರ ಹತ್ತು ಹಲವು ಅಂಶಗಳ ಜೊತೆಗೆ ಈ ವಿಷಯಗಳ ಬಗೆಗಿನ ಒಲವು-ನಿಲುವುಗಳನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸುತ್ತದೆ. ಈ ನಿಟ್ಟಿನಲ್ಲಿ ಕಾರಂತರ ಚಿಂತನೆ ಏನು? ಅವರ ಕೃತಿಗಳು ಹಸಿಹಸಿಯಾದ, ಒರಟೊರಟಾದ ನಿಲುವುಗಳನ್ನು ಬಿತ್ತರಿಸುವುದಿಲ್ಲ; ಸೂಚ್ಯವಾಗಿ ವ್ಯಕ್ತಪಡಿಸುತ್ತವೆ. ಮುಖ್ಯ ಪ್ರಶ್ನೆ ಎಂದರೆ, ಈ ನಿಲುವುಗಳು ಯಾವ ಕೇಂದ್ರದಿಂದ ಹೊಮ್ಮುತ್ತವೆ ಎಂಬುದು. ಅಥವಾ ಅವರು ಈ ಬಗ್ಗೆ ಹೆಚ್ಚು ತಲೆ ಕೆಡಿಸಿಕೊಳ್ಳದೆ ಒಬ್ಬ ಉದಾರವಾದೀ ಮಾನವೀಯ ಕಲಾಕಾರರಾಗಿ ಆ ನೆಲೆಯಲ್ಲಿ ತಮ್ಮ ಕೃತಿಗಳನ್ನು ಕಟ್ಟಿದರೆ?

ಈ ಸಂದರ್ಭದಲ್ಲಿ ಇನ್ನೂ ಒಂದು ವಿಷಯದ ಬಗ್ಗೆ ಗಮನವನ್ನು ಹರಿಸಬೇಕಾಗಿದೆ. ಇದು ಕಾರಂತರ ಸಂಗೀತ ಸಂಯೋಜನೆಗೆ ಸಂಬಂಧಪಟ್ಟಿದ್ದು. ನಿರ್ದೇಶನದ ವಿಷಯದಲ್ಲಿ ಹೇಗೋ ಹಾಗೆಯೇ ಈ ವಿಷಯದಲ್ಲಿಯೂ ಅವರು ಹೊಸತನ್ನು ಅನ್ವೇಷಿಸಿದರು, ಸ್ವಂತಿಕೆಯ ಛಾಪನ್ನು ಒತ್ತಿದರು. ಸಂಗೀತ ಸಂಯೋಜನೆ ಎನ್ನುವುದು ಇಡೀ ರಂಗಕೃತಿಯಲ್ಲಿ ಅಂತರ್ಗತವಾಗಿರುವ ಒಂದು ವಿನ್ಯಾಸ ಎಂಬ ಗಹನ ತಿಳಿವಳಿಕೆ ಅವರದು. ಸಂಗೀತದ ವೈವಿಧ್ಯ, ಸಂಗೀತಕ್ಕೂ ಸಂವಹನಕ್ಕೂ ಇರುವ ಸಂಬಂಧ, ಭಾಷೆ-ಸಂಗೀತದ ನಂಟು ಇವೆಲ್ಲದರ ಬಗೆಗಿನ ಅವರ ಚಿಂತನೆಗಳು ಮತ್ತು ಪ್ರಯೋಗಗಳು ಅವರ ಎಲ್ಲ ಕೃತಿಗಳಲ್ಲಿಯೂ ಕಾಣುತ್ತವೆ. ಇವುಗಳ ಜೊತೆ ವಾಗ್ವಾದದಲ್ಲಿ ತೊಡಗಿ ಬೆಳೆಸಿಕೊಂಡು ಹೋಗುವ ಪ್ರಯತ್ನಗಳು ನಮ್ಮ ರಂಗಭೂಮಿಯಲ್ಲಿ ಕಾಣುತ್ತಿಲ್ಲ. ಹಾಗೆಯೇ ಅವರ ಸಂಗೀತ ಸಂಯೋಜನೆಯ ಸ್ವರೂಪವನ್ನು ಕುರಿತಂತೆ ಚರ್ಚೆಗಳೂ ಆಗುತ್ತಿಲ್ಲ. ದುರಂತವೆಂದರೆ,

ಹಾಡುಗಳಿಗೆ ರಾಗ ಹಾಕುವುದು ಮತ್ತು ದೃಶ್ಯಗಳ ನಡುವೆ ಸೇತುವೆ ಸಂಗೀತಕ್ಕಾಗಿ ಧ್ವನಿಸುರುಳಿಗಳನ್ನು ಉಪಯೋಗಿಸುವುದು ಇಷ್ಟೇ ಸಂಗೀತದ ಕೆಲಸ ಎಂದು ಸ್ವತಃ ಅನೇಕ ರಂಗಕರ್ಮಿಗಳೇ ತಿಳಿದುಕೊಂಡಿದ್ದಾರೆ. ಹೀಗಾಗಿ ಸಂಗೀತ ಅವರ ಪ್ರಯೋಗಗಳ ಒಂದು ಅವಿಭಾಜ್ಯ ಅಂಗವಾಗಿರದೆ ಕೇವಲ ಆಲಂಕಾರಿಕವಾಗಿರುತ್ತದೆ. ಜೊತೆಗೆ, ಸ್ವಂತಿಕೆಯ ಕೊರತೆಯಿಂದಾಗಿ, ಅನೇಕ ಪ್ರಯೋಗಗಳ ಸಂಗೀತದಲ್ಲಿ ಕಾರಂತರ ಪ್ರತಿಧ್ವನಿಗಳು ಸತತವಾಗಿ ಕೇಳಿಬರುತ್ತವೆ.

ಕಾರಂತ ಮಾರ್ಗವಲ್ಲದೆ ಬೇರೆ ಕೆಲವು ಮಾರ್ಗಗಳೂ ಕನ್ನಡ ರಂಗಭೂಮಿಯಲ್ಲಿ ಬೆಳೆಯುತ್ತಿವೆ. ಒಂದು, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಹೆಚ್ಚು ಸ್ಪಷ್ಟ ದ್ರವ್ಯಗಳನ್ನು ಚಿಂತನೆಗಳನ್ನು ಒಡಲಿನಲ್ಲಿ ಇಟ್ಟುಕೊಂಡಿರುವ ಮಾರ್ಗ. ಆದರೆ ಈ ದಾರಿ ಹಿಡಿದ ಬಹುತೇಕ ಪ್ರಯೋಗಗಳು ನಿರೀಕ್ಷಿತವಾಗಿ ಪ್ರಾರಂಭವಾಗಿ ಅಷ್ಟೇ ನಿರೀಕ್ಷಿತವಾಗಿ ಮುಗಿಯುತ್ತವೆ; ಪೂರ್ವಯೋಜಿತ ಮಾದರಿಯಲ್ಲಿ ಮೂಡಿ ಸ್ಥಗಿತವಾಗುತ್ತವೆ. ಎರಡು, ರಾಜಕೀಯ ನಾಟಕಗಳೆಂಬ ಹಣೆಪಟ್ಟಿಯನ್ನು ಅಂಟಿಸಿಕೊಂಡ ಅತ್ಯಂತ ಹಸಿಹಸಿಯಾದ, ತೆಳುವಾದ ಪ್ರಯೋಗಗಳು. ಇವುಗಳಲ್ಲಿ ಯಾವ ವೈಚಾರಿಕ ಪ್ರಬುದ್ಧತೆಯೂ ಕಾಣುವುದಿಲ್ಲ. ಮೂರು, ಸ್ವಲ್ಪವೂ ಮೊನಚಿರದ ಒರಟಾದ ಪ್ರಹಸನಗಳು. ಇವುಗಳ ವಿನೋದ, ವ್ಯಂಗ್ಯಗಳಿಗೆ ಕಿಂಚಿತ್ತೂ ವಿಷಾದ, ಗಾಂಭೀರ್ಯಗಳಿರುವುದಿಲ್ಲ. ಇಂತಹ ಚರ್ವಿತಚರ್ವಣ ಮಾರ್ಗಗಳನ್ನು ತೊರೆದು ಸ್ವಶಕ್ತಿಯಿಂದ ಹೊಸತನ್ನು ಶೋಧಿಸುವ ರಂಗಕೃತಿಗಳೂ ನಮ್ಮಲ್ಲಿ ಇವೆ. ಇದು ನಿಜಕ್ಕೂ ಸಂತೋಷಪಡಬೇಕಾದ ಸಂಗತಿ. ಆದರೆ ಇವು ಒಂದು ನವ ಪರಂಪರೆಯ ಸೃಷ್ಟಿಯಲ್ಲಿ ತೊಡಗುವಷ್ಟು ಸಶಕ್ತವಾಗಿವೆಯೇ ಎಂಬುದು ದೊಡ್ಡ ಪ್ರಶ್ನೆ.

ಕಾರಂತರ ಕೃತಿಗಳು ಮತ್ತು ಇವರ ಮಾರ್ಗವನ್ನು ಬಿಟ್ಟು ಇನ್ನಿತರ ಮಾರ್ಗಗಳನ್ನು ಹಿಡಿದ ವಿವಿಧ ನಿರ್ದೇಶಕರ ಕೃತಿಗಳು ಇವುಗಳ ಬಗ್ಗೆ ಗಂಭೀರವಾದ ಅಧ್ಯಯನವನ್ನು ತುರ್ತಾಗಿ ಮಾಡಬೇಕಾಗಿದೆ. ಮೊಟ್ಟ ಮೊದಲನೆಯದಾಗಿ, ರಂಗಕೃತಿಗಳನ್ನು ಅರ್ಥೈಸುವ, ವ್ಯಾಖ್ಯಾನಿಸುವ ಬಗ್ಗೆ ರಸಗ್ರಹಣ ಶಿಬಿರಗಳ ಅಗತ್ಯವಿದೆ. ಈ ಕೆಲಸವನ್ನು ನಾಟಕ ಅಕಾಡೆಮಿ, ರಂಗಾಯಣ, ನೀನಾಸಂ ಅಥವಾ ಹವ್ಯಾಸಿ ನಾಟಕ ತಂಡಗಳ ಒಕ್ಕೂಟ ಯೋಜಿಸಿ, ಕಾರ್ಯಗತಗೊಳಿಸಲು ಸಾಧ್ಯ. ರಂಗಕೃತಿಗಳನ್ನು ಅಭ್ಯಾಸ ಮಾಡುವ ಕ್ರಮ ದಕ್ಕಿದಾಗ ಯಾವ ನಿರ್ದೇಶಕರನ್ನೂ ವೈಭವೀಕರಿಸದೆ ಗೌರವಿಸುವ ಮತ್ತು ಅವರ ಕೃತಿಗಳನ್ನು ರಮ್ಯಗೊಳಿಸದೆ ಅರ್ಥೈಸುವ ಸಾಮರ್ಥ್ಯ ಮೂಡುತ್ತದೆ.



ಎ. ಆರ್. ನಾಗಭೂಷಣ :

೧೨೩೫, ಕೆ. ಎಂ. ಪುರಂ, ಮೈಸೂರು - ೫೭೦ ೦೦೪

# ಮನಜ ಅವರ ಸಮಗ್ರಕಾವ್ಯ 'ವಿದ್ರೋಹ'

## ಮಾಧವ ಕುಲಕರ್ಣಿ

ಪ್ರತಿಭಟನೆಯ ಕಾವ್ಯವು ಅನಿವಾರ್ಯವಾಗಿ ತನ್ನ ಒಡಲಲ್ಲಿ ಪ್ರತಿಕ್ರಿಯೆಯನ್ನು ಅಭಿಜಾತವಾಗಿ ಕಟ್ಟಿಕೊಂಡೇ ಬರುತ್ತದೆ. ಪ್ರತಿಕ್ರಿಯೆ ಮತ್ತು ಪ್ರತಿಭಟನೆಗಳು ಕೇಂದ್ರದಲ್ಲಿದ್ದಾಗ ಅಂಥ ಅಭಿವ್ಯಕ್ತಿಗೆ ರಭಸ ಮತ್ತು ಕೋಪ-ತಾಪಗಳ ಸ್ಪರ್ಶ ಮತ್ತು ಕೋಪ ಅನಾಯಾಸವಾಗಿ ದಕ್ಕುತ್ತವೆ. ಸಾಮಾಜಿಕ ಅನ್ಯಾಯದ ವಿರುದ್ಧ ಬಂದ ಸಾಹಿತ್ಯಿಕ ಅಭಿವ್ಯಕ್ತಿಗೆ ಈ ಗುಣಗಳು ಹೇಗೆ ದಕ್ಕುತ್ತವೆಯೊ ಹಾಗೆಯೇ ತನ್ನ ವಿರುದ್ಧವೇ ಬಂಡೆದ್ದ ಆಧ್ಯಾತ್ಮಿಕ ಕವಿಗೆ ಕೂಡ ಈ ಗುಣಗಳು ದಕ್ಕುತ್ತವೆ. ಹೀಗೆ ಆತ್ಮಗತವಾದ ಕಾವ್ಯವು ಆತ್ಮದ ಭಾಷೆಯನ್ನು ರೂಢಿಸಿಕೊಳ್ಳುವಾಗ ಅದಕ್ಕನುಗುಣವಾದ ಮೌನ ಶಬ್ದಗಳನ್ನು, ಕೆಲವೊಮ್ಮೆ ನಿಶ್ಶಬ್ದವನ್ನು ಅವಲಂಬಿಸಬೇಕಾಗಿ ಬಂದರೆ ಪ್ರತಿಭಟನೆಯ ಅಭಿವ್ಯಕ್ತಿಯು ತನ್ನ ಅಭಿವ್ಯಕ್ತಿ ವಸ್ತುವಿಗನುಸಾರವಾಗಿ ನಿಶ್ಶಬ್ದದಿಂದ ದೂರವಾದ ಶಬ್ದ ಮಾಡುವ ಶಾಬ್ದಿಕ ಪರಿಸರದಲ್ಲೇ ಬೆಳೆಯಬೇಕಾಗುತ್ತದೆ. ಇದು ಅನಿವಾರ್ಯವಲ್ಲವೆನ್ನುವುದನ್ನು ಸಿದ್ಧ ಮಾಡುವುದರಲ್ಲಿಯೇ ಇಂಥ ಕಾವ್ಯದ ಸೋಲು-ಗೆಲುವು ಅಡಕವಾಗಿರುತ್ತವೆ.

ಪ್ರತಿಭಟನೆಯು ಸಾಹಿತ್ಯ ವಸ್ತುವಾಗಿ ಕಲಾತ್ಮಕ ಸ್ವರೂಪವನ್ನು ಪಡೆಯುವಾಗ ಹಲವಾರು ಆಹ್ವಾನಗಳನ್ನು ಎದುರಿಸಬೇಕಾಗುತ್ತದೆ. ಪ್ರತಿಭಟನೆಯಲ್ಲಿ ವ್ಯಂಗ್ಯ, ಮೂದಲಿಕೆ, ಲೇವಡಿ ಮುಂತಾದವುಗಳು ಸೇರಿಕೊಳ್ಳುವ ಸಾಧ್ಯತೆಗಳು ಹೆಚ್ಚು. ಇಂಥ ಸಾಹಿತ್ಯದಲ್ಲಿ ಸ್ಥಾಪಿತ ಮೌಲ್ಯಗಳನ್ನು ಎದುರಿಸುವ ಮತ್ತು ಅವುಗಳನ್ನು ಸುಳ್ಳು ಮಾಡುವ ಸನ್ನಾಹವಿರುತ್ತದೆ. ಈಜಿಪ್ತಿನಲ್ಲಿ ಹಿಂದೆ ಗುಲಾಮಗಿರಿ ಪದ್ಧತಿ ಇದ್ದಾಗ ಅವರು ಅಕ್ಷರಗಳಿಂದ ವಂಚಿತರಾದುದರಿಂದ ಅವರ ಪ್ರತಿಭಟನೆಯು ದೈಹಿಕ ಸ್ವರೂಪದ್ದೇ ಆಗಬೇಕಾಗಿತ್ತು. ಅಕ್ಷರ ಜ್ಞಾನವು ಪ್ರಸಾರಗೊಂಡಾದ ಮೇಲೆ ಮತ್ತು ಪ್ರಜಾಪ್ರಭುತ್ವವು ಸಮಾಜದಲ್ಲಿ ಬೇರು ಬಿಟ್ಟಾದ ಮೇಲೆ ಪ್ರತಿಭಟನೆಯ ಸ್ವರೂಪವು ಬದಲಾಗಲೇಬೇಕಾಯಿತು. ಸಾಂಸ್ಕೃತಿಕವಾಗಿ ತುಳಿತಕ್ಕೊಳಗಾದವರು ಸಾಂಸ್ಕೃತಿಕವಾಗಿಯೇ ತಮ್ಮ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಒಂದು ರೀತಿಯಲ್ಲಿ ಪ್ರತಿಭಟನೆಯ ಸ್ವರೂಪವೇ ಪಲ್ಲಟವಾಯಿತು. ಹಿಂಸೆ ಕ್ರೋಧಗಳನ್ನು ಬೆನ್ನಿಗಿಟ್ಟುಕೊಂಡೇ ಇಂಥ ಪ್ರತಿಭಟನೆಯು ತನ್ನನ್ನು ಆ ಅವಸ್ಥೆಗೆ ತಂದವರೊಡನೆ ಸಂವಾದಕ್ಕೆ ಇಳಿಯಬೇಕಾಯಿತು. ಇಂಥ ಸಂವಾದವು ಸ್ಥಾಪಿತ ವ್ಯವಸ್ಥೆಯ ವಿರುದ್ಧ ನಡೆಯಬೇಕಾದುದರಿಂದ ತನ್ನ ವಿರುದ್ಧ ಪಕ್ಷವು ನಂಬಿದುದನ್ನು ಸುಳ್ಳೆಂದು ಮತ್ತು ನಿರಾಧಾರವೆಂದು ವಾದಿಸುವುದು ಅನಿವಾರ್ಯವಾಯಿತು. ಪ್ರತಿಭಟನೆಯ ಕಾವ್ಯವು ಈ ಸಮಸ್ಯೆಯನ್ನು ಇನ್ನೂ ಹೆಚ್ಚು ಸಂದಿಗ್ಧವಾಗಿ ಎದುರಿಸಬೇಕಾಗುತ್ತದೆ. ಇದು ಪ್ರತಿಭಟನೆಯನ್ನು ಕೇಂದ್ರದಲ್ಲಿಟ್ಟು ಕೊಂಡು ಬರೆಯುವ ಬರಹಗಾರನ ಮೂಲ ಸಮಸ್ಯೆಯಾಗಿದೆ.

ಸದ್ಯದಲ್ಲಿ ಕಾವ್ಯವನ್ನು ಕುರಿತು ಯೋಚಿಸಬೇಕಾಗಿರುವುದರಿಂದ ಕಾವ್ಯದ ಸ್ವರೂಪವನ್ನು ಕುರಿತು ಒಂದೆರಡು ಮಾತು ಹೇಳಿದರೆ ತಪ್ಪಾಗಲಾರದು. ಮೂಲತಃ ಕಾವ್ಯವು

ಗದ್ಯದಲ್ಲಿ ಹೇಳಲಾಗದ್ದನ್ನು ಪದ್ಯದಲ್ಲಿ ಹೇಳಲು ಪ್ರಯತ್ನಿಸುತ್ತಿರುತ್ತವೆ. ಇದು ಪ್ರಾಥಮಿಕ ಮತ್ತು ಅನುಮಾನವನ್ನು ಮೀರಿದ ಸಂಗತಿ. ಗದ್ಯದಲ್ಲಿ ಹೇಳಬಹುದಾದ್ದನ್ನೇ ಪದ್ಯದಲ್ಲಿಯೂ ಹೇಳಿದ್ದರೆ ಪ್ರತಿಭಟನೆಯ ಆಳ ಎಷ್ಟೇ ಇದ್ದರೂ ಅಂಥ ಬರವಣಿಗೆ ಪದ್ಯದ ಸಾಧ್ಯತೆಯಿಂದ ವಂಚಿತವಾಗುತ್ತದೆ. ಇದನ್ನು ಗಮನಿಸದೆ ಯಾವುದೇ ಕಾವ್ಯಮೀಮಾಂಸೆಯು ಸಾಧ್ಯವಾಗುವುದಿಲ್ಲ. ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಮತ್ತು ಏಕೀಕರಣದ ಕಾಲದಲ್ಲಿ ಬಂದ ಕನ್ನಡದ ಪದ್ಯಗಳು ಹಲವಾರು ಸಲ ಗದ್ಯಕ್ಕೆ ಸಮೀಪ ಎಂಬುದನ್ನು ಗಮನಿಸಬಹುದು. ಹಾಗೆಯೇ ಒಂದು ಭಾಷೆಯ ಕಾವ್ಯವು ಯಾವ ಅಂಚಿಗೆ ಬಂದು ನಿಂತಿದೆ ಎಂದು ಗಮನಿಸದೆ ಕಾವ್ಯವನ್ನು ಬರೆಯುವುದು ಒಂದು ರೀತಿಯಿಂದ ಅನುಕೂಲತೆಗೆ ಮಾಡಿಕೊಂಡ ದಾರಿಯಾಗಿ ಕಾವ್ಯವು ಅನಾವಶ್ಯಕ ಸರಳತೆಗೆ ಇಳಿದು ಬಿಡಬಹುದು.

ಮ. ನ. ಜವರಯ್ಯನವರ ಇಲ್ಲಿಯ ವರೆಗಿನ ಕಾವ್ಯದ ಸಂದರ್ಭದಲ್ಲಿ ಈ ಮಾತುಗಳನ್ನು ಸಾಂದರ್ಭಿಕವಾಗಿ ಹೇಳಿದ್ದೇನೆ. ಅವರು ಕನ್ನಡದ ಪ್ರಾಧ್ಯಾಪಕರು, ಕಾನೂನನ್ನು ಓದಿದವರು, ಗದ್ಯದಲ್ಲಿ ಕಾದಂಬರಿ, ಕಥೆ ರಚಿಸಿದವರು; ವಿಮರ್ಶೆ ಮತ್ತು ಸಂಶೋಧನೆಯಲ್ಲಿ ಸಾಕಷ್ಟು ಕೆಲಸ ಮಾಡಿದವರು. ಇದೆಲ್ಲಕ್ಕಿಂತ ಮಿಗಿಲಾಗಿ ಅವರು ಅಂಬೇಡ್ಕರ್ ಸಾಹಿತ್ಯವನ್ನು ಕನ್ನಡಕ್ಕೆ ತರ್ಜುಮೆ ಮಾಡುವ ಭಗೀರಥ ಸಾಹಸಕ್ಕೆ ಕೈ ಹಾಕಿದವರು. ಇಷ್ಟೆಲ್ಲ ಬರವಣಿಗೆ ಮತ್ತು ಸಾಧನೆಯ ಮಧ್ಯೆ ಅವರು ಪ್ರತಿಭಟನೆಯನ್ನು ಕೇಂದ್ರದಲ್ಲಿಟ್ಟುಕೊಂಡು ಕಾವ್ಯವನ್ನು ರಚಿಸಿದ್ದಾರೆಂದು ಅದನ್ನು ಕುರಿತು ಸಹಜವಾದ ಸಾಹಿತ್ಯ ಉತ್ಸಾಹ ಮತ್ತು ಕುತೂಹಲಗಳು ನನ್ನಲ್ಲಿ ಮೂಡಿವೆ. ಈ ಅವರ ಸಂಕಲನದ ಹೆಸರು,'ವಿದ್ರೋಹ'. ದ್ರೋಹ ಮತ್ತು ವಿದ್ರೋಹಗಳು ಮೋಸದ ಎರಡು ಮುಖಗಳು. ಜವರಯ್ಯನವರ ಕಾವ್ಯದ ಮುಖ್ಯ ಗುಣವೆಂದರೆ ನಾಟಕೀಯತೆ. 'ಜಲ' ಎಂಬ ಯಶಸ್ವಿ ನಾಟಕವನ್ನು ಕೂಡ ಜವರಯ್ಯ ರಚಿಸಿದ್ದಾರೆ. ವಿದ್ರೋಹ ಪದ್ಯದಲ್ಲಿ ಕೂಡ ಒಂದು ನಾಟಕೀಯ ಸನ್ನಿವೇಶವಿದೆ. ಸ್ವಾತಂತ್ರ್ಯ ಬಂದ ದಿನದಂದು ಊರ ಪಂಚರ ಮುಂದೆ ನ್ಯಾಯ ನಡೆದಿದೆ. ಅಸ್ಪೃಶ್ಯರು ನೆಲವನ್ನು ಮತ್ತು ನೀರನ್ನು ಮಲಿನ ಮಾಡಿದ್ದಕ್ಕೆ ದಂಡಕ್ಕೆ ಒಳಗಾಗಿದ್ದಾರೆ. ಮನೆಯ ದನ ಮಾರಿ ಅವರು ದಂಡ ಕಟ್ಟಬೇಕು. ದನವಿಲ್ಲದವರು ಮನೆಯ ಮಕ್ಕಳನ್ನು ಜೀತಕ್ಕೆ ಇಟ್ಟು ದೋಷಮುಕ್ತರಾಗಬೇಕು. ಶಾಲೆಗೆ ಹೋದ ಬಾಲಕನನ್ನು ಜೀತಕ್ಕೆ ಇಡಲು ಪ್ರಯತ್ನ ನಡೆದಾಗ ಅವನು ಪಂಚರಿಗೆ ಮಣ್ಣು ತೂರಿ ಅಲ್ಲಿಂದ ಓಡಿ ಹೋಗುತ್ತಾನೆ. ಇದೊಂದು ನಾಟಕೀಯ ಸನ್ನಿವೇಶ. ಇಲ್ಲಿ ಬಾಲಕನು ಶಾಲೆಗೆ ಹೋದವನು, ಅಕ್ಷರಜ್ಞಾನ ಹೊಂದಿದವನು ಎಂಬುದನ್ನು ಗಮನಿಸಬೇಕು. ಪದ್ಯವು ಸರಳವಾಗಿ ಕಂಡರೂ ಅಕ್ಷರಜ್ಞಾನವು ಮನುಷ್ಯನಲ್ಲಿ ಅನ್ಯಾಯದ ವಿರುದ್ಧ ದನಿ ಎತ್ತಲು ಶಕ್ತಿಯನ್ನು ಕೊಡುತ್ತವೆ ಎಂಬುದನ್ನು ಕವನವು ಸರಳವಾಗಿ ಧ್ವನಿಸುತ್ತದೆ. ಜವರಯ್ಯನವರ ಪ್ರಾರಂಭದ ಕವನಗಳಲ್ಲಿಯ ಆರ್ಭಟ ಇಲ್ಲಿ ಇಲ್ಲ. ಒಂದು ರೀತಿಯಲ್ಲಿ ಇದು ಫೇಬಲ್ ಮಾದರಿಯಲ್ಲಿ ಬರೆದ ಕವನ. ಇದಕ್ಕೆ ಅಂತರ್ಗತವಾದ ನೀತಿಯ ಸ್ಪರ್ಶವಿದೆ. ನಾನು ಪ್ರಾರಂಭದಲ್ಲಿ ಹೇಳಿದ ನಿಶ್ಶಬ್ದ, ಶಬ್ದ ಮತ್ತು ಶಬ್ದರಹಿತ ಶಬ್ದ ಇವುಗಳ ಸಮಸ್ಯೆಯನ್ನು ನಾಟಕೀಯ ಸನ್ನಿವೇಶವನ್ನು ಪ್ರಸ್ತುತಪಡಿಸುವ ಮೂಲಕ ಜವರಯ್ಯನವರು ಹೇಗೆ ಪರಿಹರಿಸಿಕೊಂಡಿದ್ದಾರೆ ಎಂಬುದನ್ನು ಇಲ್ಲಿ ಕಾಣಬಹುದು.

ಜವರಯ್ಯನವರ ತಂದೆ ಲಾವಣಿಕಾರರು ಎಂಬುದು ಇಲ್ಲಿಯ ಕವನಗಳಲ್ಲಿ ನಮೂದಿತವಾಗಿದೆ. ಅವರು ದೈವವನ್ನು ನಂಬಿ ಬದುಕಿದವರು. ಕವಿ ಅಂಥ ನಂಬಿಕೆಯನ್ನು ಅಲ್ಲಗಳೆದವರು. ಇದು ಜೀವನದ ಭೂಮಿಕೆಯಲ್ಲಿ ಉಂಟಾದ ಪಲ್ಲಟ. ಈ ಪಲ್ಲಟವನ್ನು ಕವಿಯು ತನ್ನ ವೈಯಕ್ತಿಕ ಸಂಬಂಧಗಳನ್ನು ಹೇಳುವಾಗ ವೈಚಾರಿಕತೆಯಿಂದ ಬಿಡುಗಡೆಗೊಂಡು ವಿವರಿಸುತ್ತಾರೆ. ಇದು ಈ ಕವಿಯ ಕಾವ್ಯದ ಇನ್ನೊಂದು ಆಯಾಮ. ಜವರಯ್ಯನವರು ಪ್ರತಿಭಟನೆಯನ್ನು ಬಿಟ್ಟಾಗ ಹೆಚ್ಚಾಗಿ ತಮ್ಮ ಜೀವನದ-ವೈಯಕ್ತಿಕ ಸಂಬಂಧಗಳನ್ನು ಕುರಿತು ಬರೆಯುತ್ತಾರೆ. ಪ್ರಾಯಶಃ ಈ ಎರಡೂ ಧೋರಣೆಗಳ ಸಂಯೋಗವನ್ನು 'ಅತ್ತೆ ಸೊಸೆ ಆತ್ಮಕಥೆ' ಎಂಬ ಪದ್ಯದಲ್ಲಿ ಕಾಣುತ್ತೇವೆ. ಇದು ಹಲವಾರು ದೃಷ್ಟಿಯಿಂದ 'ವಿದ್ರೋಹ'ದಷ್ಟೇ ಮಹತ್ವದ ಕವನ. ಈ ಪದ್ಯದಲ್ಲಿ ಕವಿಯು ಮತ್ತೊಂದು ನಾಟಕೀಯ ಸನ್ನಿವೇಶವನ್ನು ನಿರ್ಮಾಣ ಮಾಡಿದ್ದಾರೆ:

*ಜಗದ ಬಸಿರನೇ*
*ಬಗೆದು ಸೋಸುವಾಸೆ*
*ಕಳೆದು ಹೋಗಿರುವ*
*ನನ್ನತನವ ತಂದೇ ತರುವ*
*ಋತುಮಾನದಾಸೆ.*

ಈ ಸಾಲುಗಳಲ್ಲಿ ವ್ಯಕ್ತವಾದ, ತನ್ನತನವನ್ನು ಹುಡುಕುವ ಪ್ರಯತ್ನವೇ ಕವಿಯ ಕಾವ್ಯದ ಆಶಯವಾಗಿದೆ. ತುಳಿತಕ್ಕೊಳಗಾದವರು ಮತ್ತು ಪ್ರಚಲಿತ ಸಂಸ್ಕೃತಿಯನ್ನು ತಮ್ಮದಾಗಿಸಿಕೊಳ್ಳಲಾರದವರು ತನ್ನತನವನ್ನು ಕಂಡುಕೊಳ್ಳುವುದೆಂದರೆ ಏನು ಎಂಬ ಪ್ರಶ್ನೆಯು ಕವಿಯನ್ನು ಬಹುವಾಗಿ ಕಾಡಿದೆ. ನನ್ನತನ ಮತ್ತು ತನ್ನತನ ಇವುಗಳನ್ನು ಸಾಂಸ್ಕೃತಿಕ ನೆಲೆಯಲ್ಲೇ ಕಂಡುಕೊಳ್ಳಬೇಕಾಗುತ್ತದೆ. ಆದರೆ, ತಾನು ಬದುಕಿದ ದೇಶವೇ ತನ್ನದಲ್ಲ ಎಂಬ ಬೇವಾರ್ಸಿತನ ಕಾಡುತ್ತಿದ್ದರೆ ಅಲ್ಲಿ ತನ್ನತನವನ್ನು ಕಂಡುಕೊಳ್ಳಲು ಹೊಸ ಪುರಾಣವನ್ನು ಸ್ಥಾಪಿಸುವುದರ ಜೊತೆಗೆ ಹಳೆಯ ಪುರಾಣವನ್ನು ಅಲ್ಲಗಳೆಯುವ ಕಾರ್ಯವನ್ನು ಕೈಗೊಳ್ಳಬೇಕಾಗುತ್ತದೆ. ಇದನ್ನು ಮೂರ್ತಿಭಂಜಕ ಎಂದು ಹೆಸರಿಸುವುದಕ್ಕಿಂತ ಹೊಸ ಪುರಾಣಕ್ಕೆ ತಹತಹಿಸುತ್ತಿರುವ ಮನಸ್ಸಿನ ತಳಮಳ ಎಂದು ತಿಳಿಯಬೇಕಾಗುತ್ತದೆ. ಪ್ರಾಯಶಃ ಜವರಯ್ಯನವರು ಆರ್ಯ ಸಂಸ್ಕೃತಿಯ ಫಲವಾಗಿಯೇ ನಮ್ಮ ಪುರಾಣಗಳು ಸೃಷ್ಟಿಗೊಂಡವೆಂದು ನಂಬಿದ್ದಾರೆ. ನಮ್ಮ ಇತಿಹಾಸದಲ್ಲಿ ದ್ರಾವಿಡ ಸಂಸ್ಕೃತಿಯು ಆರ್ಯ ಸಂಸ್ಕೃತಿಗೆ ಸಂವಾದಿ ಎಂಬ ತರ್ಕವು ಅವರ ಈ ನಂಬಿಕೆಗೆ ಅಡಿಪಾಯವಾದಂತಿದೆ. ಕಾವ್ಯದಲ್ಲಿ ಈ ತರಹದ ಚಿಂತನಾಪರ ತರ್ಕಕ್ಕೆ ಹೆಚ್ಚಿನ ಅವಕಾಶವಿಲ್ಲವಾದರೂ ಒಬ್ಬ ಕವಿಯ ವಸ್ತುಗಳನ್ನು ನಿಯಂತ್ರಿಸುತ್ತಿರುವ ಶಕ್ತಿ ಯಾವುದು ಎಂದು ತಿಳಿಯುವುದರಿಂದ ಆ ಕವಿಯ ಅಭಿವ್ಯಕ್ತಿ ಮಾರ್ಗವನ್ನು ಹೆಚ್ಚು ಚೆನ್ನಾಗಿ ಗ್ರಹಿಸಬಹುದು. ದ್ರೋಣಾಚಾರ್ಯ ಮತ್ತು ಕರ್ಣನ ಹುಟ್ಟುಗಳೆರಡನ್ನೂ ಅತ್ತೆ ಸೊಸೆ ಆತ್ಮಕಥೆ ಕವನದಲ್ಲಿ ತುಲನಾತ್ಮಕವಾಗಿ ಪರೀಕ್ಷಿಸಲಾಗಿದೆ. ಈ ಪುರಾಣಪುರುಷರು ಮುತ್ತೈದೆ ಎನ್ನಿಸಿಕೊಂಡವರ ಮಕ್ಕಳು ಅಲ್ಲ. ಸೂತಪುತ್ರನೆಂದು ತ್ಯಜಿಸಲ್ಪಟ್ಟ ಕರ್ಣನ ಹುಟ್ಟನ್ನು ಪ್ರಶ್ನಿಸಲು ದ್ರೋಣಾಚಾರ್ಯರಿಗೆ ಹಕ್ಕಿಲ್ಲ. ಇದನ್ನು ಸೂಚ್ಯವಾಗಿ ಮೇಲ್ವರ್ಗದವರು ಕೆಳವರ್ಗದವರ

ನೀತಿಯನ್ನು ಮತ್ತು ವ್ಯಕ್ತಿತ್ವವನ್ನು ಪ್ರಶ್ನಿಸುವ ಹಕ್ಕು ಕಳೆದುಕೊಂಡಿದ್ದಾರೆ ಎಂದು ಸೂಚಿಸಲು ಬಳಸಲಾಗಿದೆ. ಇಲ್ಲಿಯ ಸೂಚ್ಯ ಗುಣ ಮತ್ತು ನಾಟಕೀಯ ಶಕ್ತಿ ಸಬಲ ಕಾವ್ಯಕ್ಕೆ ಸಾಕ್ಷಿಯಾಗಿ ನಿಂತಿದೆ.

'ಅತ್ತೆ ಸೊಸೆ ಆತ್ಮಕಥೆ' ಕವನದ ಇನ್ನೊಂದು ಮುಖವನ್ನು 'ಗೋವಿಂದಪುರ' ಎಂಬ ದೀರ್ಘ ಕವನದಲ್ಲಿ ನೋಡಬಹುದು. ಇದು ಚಂಪೂ ಮಾದರಿಯಲ್ಲಿದ್ದು ಗದ್ಯ ಪದ್ಯಗಳ ಸುಂದರ ಮಿಶ್ರಣವಿದೆ. ಗದ್ಯದಲ್ಲಿರುವ ಪುರಾಣಗುಣ ಮತ್ತು ಪದ್ಯದಲ್ಲಿರುವ ಹಾಡಿನ ಗುಣ ಈ ಪದ್ಯಕ್ಕೆ ಒಂದು ವಿಲಕ್ಷಣ ಮೆರುಗನ್ನು ತಂದುಕೊಟ್ಟಿವೆ. ಇದು ಮೂಲದಲ್ಲಿ ಇಂದ್ರನ ಕಥೆಯಂತೆ ಕಂಡರೂ ಇಲ್ಲಿ ಬರುವ ಕರೀಂಖಾನ್, ಮಹಮದ್, ಮೈಕೇಲ್ ಮುಂತಾದ ಹೆಸರುಗಳು ಈ ಕವನವನ್ನು ವರ್ತಮಾನದಲ್ಲಿ ಸ್ಥಾಪಿಸುತ್ತವೆ. ಒಂದು ರೀತಿಯಿಂದ ಇಡೀ ಕವನವೇ ಕವಿಯು ತನ್ನ ಮತ್ತು ದೇಶದ ಸ್ಥಿತಿಗೆ ಹಿಡಿದ ಕನ್ನಡಿಯಂತಿದೆ. ಮೇಲಾಗಿ ಅಮೂರ್ತವಾದ ನೋವುಗಳಲ್ಲಿ ಬೀಡುಬಿಟ್ಟಿರುವ ಉಪಮೆಗಳು ಇಲ್ಲಿ ಅಭಿವ್ಯಕ್ತಿ ಪಡೆಯುತ್ತವೆ. ಪುರಾಣದ ಪ್ರಮುಖ ವ್ಯಕ್ತಿಗಳೆಲ್ಲರೂ ಅನೀತಿಯಿಂದ ಬದುಕಿರುವಾಗ ಮತ್ತು ಅವರನ್ನು ಆದರ್ಶವೆಂಬಂತೆ ಬಿಂಬಿಸಿರುವಾಗ ಅವರಿಂದ ಪಡೆಯುವುದೇನು, ಕಲಿಯುವುದೇನು ಎಂಬ ಪ್ರಶ್ನೆಯು ಈ ಕವಿಯನ್ನು ಅತಿಯಾಗಿ ಕಾಡಿದೆ. 'ಗೋವಿಂದಪುರ'ದಲ್ಲಿ ಬರುವ ಗೋವರ್ಧನಗಿರಿಯು ಆರ್ಯರು ಕಟ್ಟಿದ ಮೋಸದ ಬೆಟ್ಟಕ್ಕೆ ಪ್ರತಿಮೆಯಾಗುತ್ತದೆ. ಈ ಕವನವನ್ನು ಯಶಸ್ವಿ ಎನ್ನುವಲ್ಲಿ ಹಲವಾರು ಆತಂಕಗಳು ಕಾಡುತ್ತವೆ. ಮೂಲದಲ್ಲಿ ಆರ್ಯ ಸಂಸ್ಕೃತಿಯನ್ನು ವಿರೋಧಿಸುತ್ತಿರುವಾಗ ಇದಕ್ಕೆ ಪ್ರತಿರೋಧಿಯಾದ ಇನ್ನೊಂದು ಸಂಸ್ಕೃತಿಯಲ್ಲಿಯ ಒಳ್ಳೆಯ ಗುಣಗಳನ್ನು ಬಿಂಬಿಸುವ ಕೆಲವು ಅಂಶಗಳು ಇಂಥ ಕವನಗಳಲ್ಲಿ ವ್ಯಕ್ತವಾದರೆ ತುಲನಾತ್ಮಕ ಮೌಲ್ಯ ನಿರ್ಧಾರಕ್ಕೆ ಸಹಾಯವಾಗುತ್ತದೆ. ಈ ಕವನಗಳಲ್ಲಿ ಅಂಥ ಭೂಮಿಕೆ ಸಿದ್ಧವಾಗುವುದಿಲ್ಲ.

'ಅಪ್ಪ ಅವ್ವ ನಾನು' ಈ ಕವನ ಸಂಕಲನದ ಹೆಚ್ಚಿನ ಕವನಗಳು ನನ್ನ ಮನಸ್ಸನ್ನು ಆವರಿಸಿಕೊಂಡವು. ಇಲ್ಲಿ ಕವಿಯು ವೈಯಕ್ತಿಕವಾಗಿ ತನ್ನ ಸಂಬಂಧವನ್ನು ತನ್ನ ಸುತ್ತಲಿನವರೊಡನೆ ಪರೀಕ್ಷೆಗೆ ಒಳಪಡಿಸುತ್ತಾನೆ. ತನ್ನ ಸುತ್ತಲಿನ ಸ್ಥಾಪಿತ ಸಂಸ್ಕೃತಿಯನ್ನು ವಿರೋಧಿಸುತ್ತಿರುವ ಸೂಕ್ಷ್ಮ ಮನಸ್ಸೊಂದು ಇನ್ನೊಂದು ಸಂಸ್ಕೃತಿಯನ್ನು ಅರಸುತ್ತಿರುವಾಗ ಅದನ್ನು ವೈಯಕ್ತಿಕ ಸಂಬಂಧಗಳಲ್ಲಿಯೇ ಕಾಣುವ ಅನಿವಾರ್ಯತೆ ಉಂಟಾಗುತ್ತದೆ. ಇಂಥ ಅನಿವಾರ್ಯತೆಯೇ ಈ ಕವನಗಳಿಗೆ ಕಾವ್ಯಬಲವನ್ನು ಒದಗಿಸುತ್ತದೆ. ಈ ಸಂಕಲನದ ಮೊದಲನೆಯ ಕವನ 'ಅಪ್ಪ ಅವ್ವ ನಾನು' ಇಂಥ ಒಂದು ಶೋಧನೆಯ ಅಪೂರ್ವವಾದ ಪದ್ಯ. ತಾಯಿ ಮತ್ತು ತಂದೆ ಇಬ್ಬರೂ ಕವಿ ಬಾಲಕನ ಬಗ್ಗೆ ಕಳಕಳಿ ಹೊಂದಿದ್ದರೂ ಕೂಡ ಇಬ್ಬರ ಕಳಕಳಿಯು ಬೇರೆ ಬೇರೆ ತರಹದ್ದು. ಆದರೆ, ಮೂಲದಲ್ಲಿ ಅಂತಃಕರಣವೇ ಈ ಎರಡೂ ಕಳಕಳಿಗಳನ್ನು ನಿಯಂತ್ರಿಸುತ್ತದೆ. ಮಗನಿಗೆ ಪ್ಲೇಗಿನ ಮಾರಿ ಬಡಿದುಕೊಂಡಾಗ ತಾಯಿಯು ಊರ ದೇವತೆಯನ್ನು ಮೊರೆ ಹೊಕ್ಕರೆ ತಂದೆಯು ಸಂಜೀವನಿಯನ್ನು ಹುಡುಕಿಕೊಂಡು ಹೊರಡುತ್ತಾನೆ. ಇದು ಸಾಂಕೇತಿಕವಾಗಿ ಬಹಳ ಅರ್ಥಪೂರ್ಣವಾದದ್ದು. ತಾಯಿಯ ಮೂಢ ನಂಬಿಕೆಯಲ್ಲಿ

ಮಗನ ಚೇತರಿಕೆಯ ಆಶಯವಿದೆ. ಹಾಗೆಯೇ ತಂದೆಯ ಹುಡುಕಾಟದಲ್ಲಿ ಒಂದು ರೀತಿಯ ವೈಜ್ಞಾನಿಕ ಬುದ್ಧಿಯಿದೆ. ತಂದೆಯನ್ನು ಕುರಿತು ಬರೆವ ಈ ಕೆಳಗಿನ ಸಾಲುಗಳನ್ನು ಗಮನಿಸಬೇಕು:

*ಕಲಿಸಿದರು ನನಗೆ ಹಟಸಿದ್ಧಿ ಬಹುಬುದ್ಧಿ ಸರ್ವಮೇರು*
*ತಿಳಿಸಿದರು ಜೊತೆಗೆ ಕಾರಣ ಕಾಣದೆ ಮುಂದಾಗದಿರು*
*ತೋರಿದರು ನನಗೆ ಸಂಜೀವನಿ ಮೂಲಬೇರು*
*ಆ ನಾಟಿಕಲೆಯ ಕಲಿಸಲೇ ಇಲ್ಲ ಇನ್ನಾರಿಗೂ ಅವರು*
*ಮನದಟ್ಟು ಮಾಡಿದರು ನನಗೆ -*

ತಂದೆಯ ಈ ವ್ಯಕ್ತಿತ್ವದಲ್ಲಿ 'ಹಟಸಿದ್ಧಿ' ಬಹು ಮಹತ್ವದ್ದು. ಮನಜ ಅವರನ್ನು ವೈಯಕ್ತಿಕವಾಗಿ ಬಲ್ಲ ನನಗೆ ಅವರ ಹಟಸಿದ್ಧಿಯ ಅರಿವಿದೆ. ಈ ಹಟಸಿದ್ಧಿ ಇಲ್ಲದಿದ್ದರೆ ಅವರು ಸಾವಿರಾರು ಪುಟಗಳ ಅಂಬೇಡ್ಕರ್ ಸಾಹಿತ್ಯವನ್ನು ಕನ್ನಡಕ್ಕೆ ತರ್ಜುಮೆ ಮಾಡಲು ಸಾಧ್ಯವೇ ಇರಲಿಲ್ಲ. ಹಾಗೆಯೇ ತಂದೆಯು ತನಗೆ ಗೊತ್ತಿದ್ದ ವಿದ್ಯೆಯನ್ನು ಬೇರಾರಿಗೂ ಕಲಿಸದೆ ಗೌಪ್ಯವಾಗಿ ಇಟ್ಟು, *ವೈರಿ ಜೀವಕೂ ಸಲ್ಲಬೇಕು ಆ ಬೇರು* ಎಂದು ಕೂಡ ನಂಬಿದ್ದಾರೆ. ಇದು ಒಂದು ರೀತಿಯ ವಿಕ್ಷಿಪ್ತತೆ. ಹೊಸ ಸಂಸ್ಕೃತಿಯನ್ನು ಅರಸಿ ಹೊರಟ ಕವಿಗೆ ತನ್ನ ಸಮೀಪದಲ್ಲಿಯೇ ಇರುವ ಇಂಥ ಅಂತಃಕರಣ ಮಿಶ್ರಿತ ವಿಕ್ಷಿಪ್ತತೆಯು ಜೀವನದ ಅಗಾಧವನ್ನು ತೆರೆದಿಡುತ್ತದೆ. ಹಾಗೆಯೇ ಹೊಸ ಸಂಸ್ಕೃತಿಯ ಬೇರುಗಳು ಮಾನವೀಯತೆಯಲ್ಲಿ ಅಡಗಿವೆ ಎಂಬುದನ್ನು 'ಅಪ್ಪ ಅವ್ವ ನಾನು' ಕವನ ಸಂಕಲನದ ಎಲ್ಲ ಕವನಗಳು ತಮ್ಮ ಅಂತರ್‌ಧ್ವನಿಯಾಗಿ ಹೊಂದಿವೆ. 'ಅವ್ವ ಹೇಳಿದ ಕನ್ನಡ ಪಾಠ' ಮತ್ತೆ ವ್ಯಂಗ್ಯ ಸ್ಪರ್ಶದಿಂದಾಗಿ ತೆಳುವಾಗುತ್ತವೆ. ಮುಂದಿನ ಕವನ 'ಮಾಗಿ' ಮನಜ ಅವರ ಕಾವ್ಯಶಕ್ತಿಗೆ ಸಾಕ್ಷಿಯಾಗಿ ಮೂಡಿ ಬಂದಿದೆ. ಇಲ್ಲಿಯ ಕಾವ್ಯವಸ್ತು ಅವರ ಕಾದಂಬರಿ 'ಮಾಗಿ'ಯಲ್ಲಿ ಅಭಿವ್ಯಕ್ತಿ ಪಡೆದಿದ್ದರೂ ಕೂಡ ಇಲ್ಲಿ ಅದು ವ್ಯಕ್ತವಾದ ರೀತಿ ಹೆಚ್ಚಿನ ಮಾನವೀಯತೆಯ ಅಂಶಗಳನ್ನು ಹೊಂದಿದೆ. ಮಾಗಿ ಚಿಕ್ಕಿ ಸುಖವಂಚಿತಳು. ಅವಳು ತಾಯಿಯ ತಂಗಿ. ಮಕ್ಕಳಿಲ್ಲದವಳು. ಬಹು ವರ್ಷದ ನಂತರ ಜನ್ಮ ನೀಡಿದ ಅವಳ ಮಗು ಆರೇ ದಿನಕ್ಕೆ ಜೀವ ತೊರೆಯಿತಂತೆ. ತನ್ನ ಎದೆ ಹಾಲಿನಿಂದ ಕವಿಯನ್ನು ತೃಪ್ತಿಪಡಿಸಿ ಅವಳು ಅಕ್ಷರಶಃ ತನ್ನ ನೋವು ಕಳೆದುಕೊಳ್ಳುತ್ತಾಳೆ. ಕವಿಯ ತಾಯಿ ತನ್ನ ಹಾಲನ್ನು ತ್ಯಾಗ ಮಾಡಿ ತಂಗಿಯ ಹಾಲಿಗೆ ಮಗುವನ್ನು ಒದಗಿಸಿದ ರೀತಿ ಈ ಪದ್ಯದಲ್ಲಿ ಬೆರಗುಗೊಳಿಸುವಂತೆ ನಿರೂಪಿತವಾಗಿದೆ. ಇಂಥ ಚಿಕ್ಕಿ ಕೊನೆಗಾಲದಲ್ಲಿ ಕಷ್ಟದಿಂದ ಕವಿಯಿಂದ ದೂರವಾಗಿ ಮಡಿದ ಸನ್ನಿವೇಶ ಕವಿಯ ಮನಸ್ಸನ್ನು ಬಹುವಾಗಿ ಕಲಕಿದೆ. ಈ ರೀತಿಯಾಗಿ ಕವನದ ತುಂಬ ವ್ಯಾಪಿಸಿದ ಚಿಕ್ಕಿ ಕವಿಯ ಮನಸ್ಸನ್ನು ಆವರಿಸಿ ಮಾಗಿವ ಜೀವವಾಗಿ ಬದುಕಿದ್ದಾಳೆ.

ಇದೇ ಸಂಕಲನದ 'ಭಿಕ್ಷುಕ ಮಿತ್ರನ ಕಥನ ಕಾವ್ಯ' ಎಂಬ ಕವನವು ಬೇರೊಂದು ದೃಷ್ಟಿಯಿಂದ ಗಮನಾರ್ಹವಾಗಿದೆ. ಇಲ್ಲಿ ಬಡ ಬ್ರಾಹ್ಮಣನೊಬ್ಬನು ಕಥಾನಾಯಕನಾಗಿದ್ದಾನೆ. ಅವಧಾನಿ ಭಾಸ್ಕರನು ಭಿಕ್ಷುಕ. ಅವನು ತನ್ನ ಹೊಟ್ಟೆಗೋಸ್ಕರ ವಿವಿಧ ದೇವರುಗಳನ್ನು

ಅವರವರ ಜಾತಿಗನುಸಾರವಾಗಿ ಅವರವರ ಮನೆಯೆದುರು ಹೊಗಳುತ್ತಾನೆ. ಆದರೆ ಸತ್ಯವೇ ಅವನಿಗೆ ಮುಳುವಾಗಿದೆ. ಹೊಸ ದೇವಸ್ಥಾನದ ಹಿಂದಿನ ಕಾರಸ್ಥಾನವು ಅವನಿಗೆ ಗೊತ್ತಾಗುವುದರಿಂದ ಅವನು ಪೊಲೀಸ್ ಠಾಣೆಗೆ ಹೋಗಬೇಕಾಗುತ್ತದೆ. ಒಂದು ಹಂತದಲ್ಲಿ ಕವಿ, ಶೋಷಣೆಯು ಯಾರನ್ನೂ ಬಿಡುವುದಿಲ್ಲ ಎಂಬ ಅಂಶವನ್ನು ಕವನದಲ್ಲಿ ತರುತ್ತಾರೆ. ಇಂಥ ಕವನಗಳಲ್ಲಿ ಕವಿಯು ನಮ್ಮ ಸಮಾಜದ ಸಮಸ್ಯೆಗಳನ್ನು ವಸ್ತುನಿಷ್ಠವಾಗಿ ನೋಡಬಲ್ಲರೆಂಬುದಕ್ಕೆ ಸಾಕ್ಷಿ ದೊರೆಯುತ್ತದೆ.

'ವಿದ್ರೋಹ' ಸಮಗ್ರಕಾವ್ಯ ಸಂಪುಟದಲ್ಲಿ 'ಜಲ' ಸಾಮಾನ್ಯವಾಗಿ ಜೀವನಕ್ಕೆ ಸಂಕೇತವಾಗುತ್ತದೆ. ಮನಜ ಅವರ ನಾಟಕ 'ಜಲ' ಬುದ್ಧನ ಕಥೆಯನ್ನು ಹೊಂದಿದ್ದರೂ ಕೂಡ ಜೀವನಕ್ಕೆ ಜಲವು ಸಂಕೇತವಾಗುವ ಅಂಶವನ್ನೇ ಹೊಂದಿದೆ. 'ಪೂರ್ಣಚಂದ್ರ ಮತ್ತು ಜೀವಜಲ' ಎಂಬ ಕವನದಲ್ಲಿ ಜಲವು ಜೀವನಕ್ಕೆ ಸಂಕೇತವಾಗುವ ಒಂದು ಅನನ್ಯ ಪರಿಯನ್ನು ನೋಡಬಹುದು. ಸಾಮಾಜಿಕ ಭೂಮಿಕೆಯನ್ನು ಬಿಟ್ಟು ಮತ್ತು ಹೆತ್ತವರ ಸಂಬಂಧವಿಲ್ಲದ ಕವನಗಳಲ್ಲಿ 'ತೇಲಿ ಬಂದ ನೆನಪು' ತುಂಬ ಸುಂದರ ಚಿಕ್ಕ ಪದ್ಯವಾಗಿದೆ. ಇಲ್ಲಿ ಬರುವ 'ನಾನೇನು ಮಾಡಲಿ ಗೆಳತಿ' ಎಂಬ ಸಾಲು ಪ್ರತಿ ನುಡಿಯ ಕೊನೆಗೆ ಬಂದು ಎದೆಯಾಳದ ದುಃಖಕ್ಕೆ ಸಾಕ್ಷಿಯಾಗುತ್ತದೆ.

*ಮರೆತನೆಂದೆ ನಂಬಿರುವೆ*
*ತೊರೆದನೆಂದೆ ತೊರೆದಿರುವೆ*
*ನಿನ್ನ ನೆನಪು ಸದಾ ಸತಾಯಿಸಿದರೆ*
*ನಾನೇನು ಮಾಡಲಿ ಗೆಳತಿ ?*

ಇಂಥ ಸಾಲುಗಳಲ್ಲಿ ಆತ್ಮೀಯರಾಗುತ್ತಾರೆ. ಜೀವನದ ನೆನಪುಗಳು, ಚಿಕ್ಕ ಪುಟ್ಟ ಘಟನೆಗಳು ಇವರನ್ನು ಕಾಡಿವೆ, ಕಾವ್ಯ ಮಾಡಿಸಿಕೊಂಡಿವೆ. ಇದೇ ರೀತಿಯ ಇನ್ನೊಂದು ಪದ್ಯ 'ಅವಿಶ್ರಾಂತ ಸತ್ಯ'. ಪ್ರಿಯತಮೆಯನ್ನು ಯಾವುದಕ್ಕೆ ಹೋಲಿಸಲಿ ಎಂದು ಯೋಚಿಸುತ್ತ ಪದ್ಯ ಈ ರೀತಿಯಾಗಿ ಕೊನೆಯಾಗುತ್ತದೆ.

*ಹೆಚ್ಚಿನ ಮಾತೇಕೆ ?*
*ಸತ್ಯವ ಹೇಳಿಬಿಡುತ್ತೇನೆ,*
*ನನ್ನೊಳಗೆ ನೀನಿರು*
*ಯಾಕೆಂದರೆ -*
*ನಿನ್ನೊಳಗೆ ನಾನಿರುವುದು*
*ಚಂದ್ರನಂತಲ್ಲದೆ*
*ಶಿಲೆಯಂತಲ್ಲದೆ*
*ಹೂವಿನಂತಲ್ಲದೆ*
*ಅವಿಶ್ರಾಂತ ಹೊಳೆವ ಸತ್ಯವಂತೆ.*

ಮನಜ ಅವರ ಕಾವ್ಯವು ಪ್ರತಿಭಟನೆಯೊಡನೆ ಪ್ರಾರಂಭವಾಗಿ ವ್ಯಂಗ್ಯ, ಲೇವಡಿ ಮತ್ತು ಮೂದಲಿಕೆಗಳನ್ನು ಮೈಗೂಡಿಸಿಕೊಂಡಿತು. ನಂತರ ಮಾನವನ ಸಂಬಂಧಗಳನ್ನು ಪರೀಕ್ಷಿಸುತ್ತಾ

ಒಂದು ಹೊಸ ಮಾನವೀಯ ಸಂಸ್ಕೃತಿಯ ಹೊಳಹುಗಳನ್ನು ಸೆರೆಹಿಡಿಯಿತು. ಅವರ ಅಪಾರ ಓದು ಅವರಿಗೆ ಈ ಎರಡೂ ಧೋರಣೆಗಳನ್ನು ಸಮ್ಮಿಶ್ರಗೊಳಿಸಿ ಮಾಗಿದ ಕವಿಯಾಗುವುದಕ್ಕೆ ಸಹಾಯ ಮಾಡಿದೆ. ಎಲ್ಲಾ ಪ್ರತಿಭಟನೆಯ ಹಿಂದೆ ಅಪಾರ ನೋವಿದೆ. ಈ ನೋವಿನ ಅಂತರಾಳದ ಸೂಕ್ಷ್ಮ ಮಾತುಗಳು ಅವರ ಕಾವ್ಯದಲ್ಲೀಗ ಕಂಡುಬರುತ್ತಿವೆ. ಓದುಗರ ಸುಪ್ತ ಪ್ರಜ್ಞೆಯನ್ನು ಇಂಥ ಒಳದನಿಗಳೆ ತಟ್ಟಬಹುದು. ಮನಜ ಅವರ ಮುಂದಿನ ಕಾವ್ಯವು ನಿಶ್ಚಿತವಾಗಿಯೂ ಈ ದಿಕ್ಕಿನಲ್ಲಿ ಸಾಗುತ್ತದೆ ಎಂದು ನನ್ನ ಅನಿಸಿಕೆ. ಶೋಷಣೆ ಮೂಲವಾದ ನಮ್ಮ ಸಂಸ್ಕೃತಿ ಎಷ್ಟೇ ಅವನತಿಗೊಂಡಿದ್ದರೂ ಇದರಲ್ಲಿಯೂ ಓಯಸಿಸ್‌ಗಳು ಇರಬಹುದು. ಅವು ಮನಜ ಅವರಿಗೆ ದಕ್ಕುವಂತಾಗಲಿ.

● ● **ಮಾಧವ ಕುಲಕರ್ಣಿ** : EWS ೧೫೫೫, ೯ನೇ ಮುಖ್ಯರಸ್ತೆ, ಪ್ರಥಮ ಹಂತ, ಹೆಬ್ಬಾಳ, ಮೇಟಗಳ್ಳಿ ಅಂಚೆ, ಮೈಸೂರು - ೫೭೦ ೦೧೬

## ಎರಡು ಕವಿತೆಗಳು

ಗೀತಾ ವಸಂತ

### ೧. ಹೊಳೆಯೇ...

ಹೊಳೆಯೇ
ಕತ್ತಲು ಮುತ್ತಿದೆ ಹೊಳೆಯೇ
ಜೀವವಾಹಿನಿಯೇ .
ಹರಿವ ಸಾಕ್ಷಿಪ್ರಜ್ಞೆಯೇ
ಅರೆಬೆಂದ ಕನಸುಗಳ ಮೈದಡವು
ಹಗೆ ಹೊಗೆಯ ನಂದಿಸು
ಮನಸುಗಳ ಕೊಳೆ ತೊಳೆ
ಪಾರದರ್ಶಕಗೊಳಿಸು
ನಿನ್ನ ಹಾಗೆ.

ಸಂಸ್ಕೃತಿಗಳ ಪೊರೆದ ತೊಟ್ಟಿಲೇ
ಮೀಸೆ ಬಂದ ಮಕ್ಕಳು
ಕೋಟೆ ಕಟ್ಟಿ
ಝಳಪಿಸಿ ಕತ್ತಿ
ಕಾದರು ಕೊಂದರು ಕಟ್ಟಿದರು
ಧರ್ಮ - ಸಂಸ್ಕೃತಿ!

ಆ ಮರದ ನೆರಳು
ಇಲ್ಲಿ ಬೀಳದಂತೆ
ಈ ಗಿಡದ ಟಿಸಿಲು

ಅಲ್ಲಿ ಬಾಗದಂತೆ
ಹೂವು ಚೆಲ್ಲದಂತೆ, ಹಕ್ಕಿ
ಹಾಡದಂತೆ ಗೋಡೆ ಕಟ್ಟಿ
ಕಿವುಡಾಗಿ ಕುರುಡಾಗಿ
ದ್ವೀಪವಾದೆವು.

ಬೇಟೆ ಹುಡುಕುತ್ತಿದ್ದೇವೆ ಎಲ್ಲ
ಬಾಲ ಸೆಟೆದು ಕಿವಿ ನಿಮಿರಿಸಿ
ಸೀಳು ನಾಯಿಗಳಂತೆ...
ಭಯಗ್ರಸ್ತರು ಸದಾ
ಭದ್ರಪಡಿಸಿದ್ದೇವೆ
ಗಾಳಿಯೂ ಸುಳಿಯದಂತೆ
ಇರುವ ಕಿಡಕಿಗಳೆಲ್ಲ ಮುಚ್ಚಿ
ಒಳಗೆಲ್ಲ ಸಂಶಯ ಮೊಳೆತು
ಕಳಿತು ಕೊಳೆತು ಹೋಗಿದೆ
ಮನಸು.

ನಿಷೇಧಿತರು!
ಕಣ್ಣು ಕೂಡದಂತೆ
ಮನಸು ಬೆಸೆಯದಂತೆ
ನಿಷೇಧಾಜ್ಞೆಯಲ್ಲೇ ಬದುಕುವುದು
ರೂಢಿಯಾಗಿದೆ ನಮಗೆ.

ಮಿಡಿಯಲೊಲ್ಲದು ಹೃದಯ
ಕೂಡಲೊಲ್ಲದು ಹಾಡು
ತೀರ ಕಾಣದ ಹಾಯಿ
ಆಳುತ್ತ ಆಳಿಸಿಕೊಳ್ಳುತ್ತ
ನಂಬುತ್ತ ನಂಬಿಸುತ್ತ
ಬೀಗ ಜಡಿದು ಪ್ರಜ್ಞೆಗೆ
ಬಾಡಿಗೆ ಬದುಕು.

ಹೊಳೆಯೇ ನಮ್ಮ ಉಳಿಸು
ತಿಳಿಗೊಳಿಸು ನಿನ್ನಂತೆ
ನಿಜದ ಬದುಕ ತಿಳಿಸು
ಹರಿದುಬಿಡು ಕಟ್ಟೆಯೊಡೆದು

ಸೇತುವೆಗಳ ಪಿಸುಮಾತ ಆಲಿಸು
ತೀರಗಳನೊಮ್ಮೆ ಸೇರಿಸು
ಹೊಳೆಯೇ ಹೊಳೆಯೇ...

### ೨. ಕಾಡುವ ಗೆಳೆಯನಿಗೆ...

ಯಾರು ನೀನು ಕಾಡುವ ಗೆಳೆಯಾ,
ನಿರಂತರ ಹುಡುಕಾಟದಲಿ
ಎಂದೂ ನಿಲುಕದ ಇನಿಯಾ,
ಬೆತ್ತಲೆ ಆಗಸವೇ ನೀನು?

ಸೂರ್ಯೋದಯದಲಿ
ಸ್ನಿಗ್ಧ ನಗೆ ನಕ್ಕವನೇ
ಉರಿವ ಧರೆಯೆದೆ ಮೇಲೆ
ಮಳೆಯಾಗಿ ಸುರಿವನೇ
ತೆಕ್ಕೆಯೊಳಗಿಕ್ಕಿ ಕರುವಂತೆ ನನ್ನ
ಯುಗಯುಗದ ನೋವ ನೆಕ್ಕಿದವನೇ,
ಸ್ವರ್ಗ ಮರ್ತ್ಯ ಪಾತಾಳಪ್ರಜ್ಞೆ ದಾಟಿ
ಭಾವ ಮೀರಿದ ಅನುಭಾವದೊಳೆನ್ನ
ಜೀಕಿ ಜೋಗುಳ ಹಾಡಿದವನೇ
ಕಲ್ಪನೆ ಮಾತ್ರವೇ ನೀನು?

ಅವನು ಇವನು ಯಾರಲ್ಲೂ
ನಾ ಹುಡುಕುವ ನೀನಿಲ್ಲ.
ಕೊನೆಯಿರದ ನಿರೀಕ್ಷೆಯನೇ
ಕೌದಿ ಹೊಲಿದು ಹಾಸಿ ಹೊದ್ದರೂ
ಆವಿರ್ಭವಿಸಲಿಲ್ಲ ನೀನು ಮಾತ್ರ!
ನೀನೇನು ಮೀರಿ ಹಂಬಲಿಸಿದ
ಅಕ್ಕ ಹಲುಬಿದ
ಯಾರೂ ಕಾಣದ ದೇವರೇ?

ಅವರೂ ಮಣ್ಣಲ್ಲಿ ಹುಟ್ಟಿ
ರಾಗ ತುಂಬಿದ ಗಂಡರನೊಲ್ಲದೇ
ಅಮೂರ್ತದೆಡೆ ಕೈ ಚಾಚಿದರೇ?

● ● ಡಾ. ಗೀತಾ ವಸಂತ : ಅಂಚೆ- ಹಾಸಣಗಿ, ತಾ. ಯಲ್ಲಾಪುರ (ಉ. ಕ.)

# ಸಮೂಹ ಮಾಧ್ಯಮಗಳು ಮತ್ತು ಸಾಮಾಜಿಕ ಜವಾಬ್ದಾರಿ

ಕೇಶವ ಶರ್ಮ ಕೆ.

ಈ ಹೊತ್ತಿಗೆ ಸಮೂಹ ಮಾಧ್ಯಮಗಳ ಕುರಿತು ಮೂರು ರೀತಿಯ ಜನರು ಮಾತಾಡಲು ಸಾಧ್ಯ. ಸಮೂಹ ಮಾಧ್ಯಮಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು; ಸಮೂಹ ಮಾಧ್ಯಮಗಳಿಗೆ ಬಂಡವಾಳ ಹಾಕಿರುವವರು ಮತ್ತು ಸಮೂಹ ಮಾಧ್ಯಮಗಳಿಂದ ವಿಷಯಗಳನ್ನು ಸ್ವೀಕರಿಸುವವರು. ಈಗ ನಾನು ಹೇಳಬೇಕಾಗಿರುವುದು — ಸಮೂಹ ಮಾಧ್ಯಮಗಳು ಮತ್ತು ಅದರ ಸಾಮಾಜಿಕ ಜವಾಬ್ದಾರಿಯ ಕುರಿತು. ಸಾಮಾಜಿಕನೇ ಆಗಿರುವುದರಿಂದ ಸಾಮಾಜಿಕ ಜವಾಬ್ದಾರಿಯನ್ನು ಕುರಿತು ಒಂದಿಷ್ಟು ಹೇಳಲು ಸಾಧ್ಯ. ಆದರೆ, ನನಗೆ ಇರುವ ಅರಿವು ಸಾಮಾಜಿಕನಾಗಿ ಇರುತ್ತದೆಯೇ ಹೊರತು ಈ ರೀತಿಯ ಸಮೂಹ ಮಾಧ್ಯಮಗಳ ಒಳ ಅರಿವಿನಿಂದ ನನ್ನ ಯಾವದೇ ಚಿಂತನೆಯ ಕ್ರಮ ಹುಟ್ಟಿಲ್ಲ.

ಒಂದು ಸಣ್ಣ ಉದಾಹರಣೆಯೊಂದಿಗೆ ಈ ಚರ್ಚೆ ಶುರುಮಾಡಬಹುದು. ನಗರಗಳಲ್ಲಿ ಓಡಾಡುವವರು ರಸ್ತೆಯ ನಡುವಿನಲ್ಲಿ ಓಡಾಡುವುದಿಲ್ಲ. ಫುಟ್‌ಪಾತ್ ಮೇಲೆ ಓಡಾಡುತ್ತಾರೆ. ಒಂದು ವೇಳೆ ರಸ್ತೆಯ ನಡುವಿನಲ್ಲಿ ಓಡಾಡಿದರೆ ಇವರ ಕತೆಯೇನಾಗಬೇಕಾಗುತ್ತಿತ್ತು ? ಜೀವದ ಮೇಲೆ ಜವಾಬ್ದಾರಿಯಿರುವ ಯಾವ ಮನುಷ್ಯನೂ ರಸ್ತೆಯ ನಡುವಿನಲ್ಲಿ ಓಡಾಡಲಾರ. ಇದೇ ರೀತಿಯಲ್ಲಿ ಇನ್ನೊಂದು ಉದಾಹರಣೆ ಕೊಡುತ್ತೇನೆ : ಮನೆಯೊಳಗೆ ಯಾವುದೇ ಸಾಮಾನು ಮುಗಿದಾಗಲೂ ಅದನ್ನು ತಂದುಕೊಡುವುದು ಮನೆಯ ಯಜಮಾನನ ಜವಾಬ್ದಾರಿ ಎಂದು ನಾವು ಭಾವಿಸುತ್ತೇವೆ. ಹಾಗೆಯೇ ಮನೆಯಲ್ಲಿ ಅಡುಗೆಯನ್ನು ಮಾಡುವ ಜವಾಬ್ದಾರಿಯು ಮನೆಯ ಹೆಂಗಸರದು. ಮನೆಯ ಯಜಮಾನ ಕೇಳಬಹುದು. ಮನೆಯಲ್ಲಿ ಸಾಮಾನು ಮುಗಿದರೆ ಅದನ್ನು ಯಜಮಾನನೇ ತಂದು ಕೊಡಬೇಕೆಂದು ಭಾರತದ ಸಂವಿಧಾನ ಹೇಳಿದೆಯೆ ? ಸ್ತ್ರೀವಾದದ ಚರ್ಚೆಯ ಸಂದರ್ಭದಲ್ಲಿ ಅಥವಾ ಆಧುನಿಕ ಚಿಂತನೆಯ ಕ್ರಮದಲ್ಲಿ ಈ ಪ್ರಶ್ನೆಯು ಮತ್ತೊಂದು ಥರ ಬಂದಿದೆ. ಅಡುಗೆಯನ್ನು ಮನೆಯ ಹೆಂಗಸರೇ ಮಾಡಬೇಕೆ ? "ಪೇಟೆಗೆ ಹೋಗುವುದು ಅಪ್ಪನ ಕೆಲಸ, ಅಡುಗೆ ಮಾಡುವುದು ಅಮ್ಮನ ಕೆಲಸ, ಕತೆಯನ್ನು ಹೇಳುವುದು ಅಜ್ಜಿಯ ಕೆಲಸ" ಎಂದು ನಂಬಿಕೊಂಡೇ ಬಂದಿರುವ ಸಮಾಜದಲ್ಲಿ ಮೂಲಭೂತವಾಗಿ ಈ ರೀತಿಯ ಕೆಲಸವನ್ನು ಒಬ್ಬೊಬ್ಬರಿಗೆ ಹಂಚಿಕೊಡಲಾಯ್ತು. ಈ ತರ ಹಂಚಿಕೊಡುವಾಗಲೇ ನಾವು ಅದಕ್ಕೆ ಜವಾಬ್ದಾರಿಯ ಪ್ರಶ್ನೆಯನ್ನು ಹೊರಿಸಿದೆವು. ಈ ದೃಷ್ಟಿಯಿಂದ 'ಸಮೂಹ ಮಾಧ್ಯಮಗಳು ಮತ್ತು ಸಾಮಾಜಿಕ ಜವಾಬ್ದಾರಿ'ಯೆಂಬ ಪ್ರಶ್ನೆಯನ್ನು ಕೈಗೆತ್ತಿಕೊಂಡರೆ ಸಮಸ್ಯೆಗಳು ಶುರುವಾಗುತ್ತವೆ. ಈ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯನ್ನು ಒಂದು ರೀತಿಯ ಸಂವಾದಿಯಾದ ಪದವಾಗಿಯೇ ನಾವು ಪ್ರಾಯಶಃ ಬಳಸುತ್ತಿದ್ದೇವೆ. ಸಾಮಾಜಿಕ ಜವಾಬ್ದಾರಿಯೆನ್ನುವುದನ್ನು ಸಾಂದರ್ಭಿಕವಾಗಿ ನಾವು ನಿರ್ವಚಿಸಬಹುದೇ ಹೊರತು ಅದಕ್ಕೆ ನಿರ್ದಿಷ್ಟವಾದ ಒಂದು 'ಆದರ್ಶ ಮಾದರಿ'ಯೆನ್ನುವುದಿಲ್ಲ. ಪ್ರಜಾಪ್ರಭುತ್ವದಲ್ಲಿಯಂತೂ

ಈ ರೀತಿಯ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯು ಅನೇಕ ರಹದಾರಿಗಳನ್ನು ತೆರೆದಿದೆ. 'ಮಂತ್ರಿಮಹೋದಯರ ಸಾಮಾಜಿಕ ಜವಾಬ್ದಾರಿ; ಅಧ್ಯಾಪಕರ ಸಾಮಾಜಿಕ ಜವಾಬ್ದಾರಿ, ಸಾಹಿತಿಗಳ ಸಾಮಾಜಿಕ ಜವಾಬ್ದಾರಿ'; ಮುಂತಾಗಿ ನಾವು ಮಾತಾಡುವ ಸಂದರ್ಭದಲ್ಲಿ ಈ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯು ಬಹಳ ಸಂವಾದಿಯಾದ ಹಾಗೂ ಸಾಂದರ್ಭಿಕವಾದ ಅರ್ಥವಂತಿಕೆಯು ಅನೇಕ ಸಂದರ್ಭದಲ್ಲಿ ಆ ಸಂದರ್ಭವನ್ನು ಹೊರತುಪಡಿಸಿದರೆ ಯಾವ ಚೌಕಟ್ಟುಗಳನ್ನೂ ಒಳಗೊಂಡಿರುವುದಿಲ್ಲ. ಪ್ರಜಾಪ್ರಭುತ್ವದ ಮಾದರಿಯೊಳಗಡೆ ಈ 'ಜವಾಬ್ದಾರಿ'ಯ ಪ್ರಶ್ನೆಯನ್ನು ನಮಗೆ ಬೇಕಾದಂತೆ ತಿರುಚಿಕೊಂಡು ಅರ್ಥವಿಸಿಕೊಳ್ಳಲು ಸಾಧ್ಯ. ವಾಸ್ತವವಾಗಿ ಪ್ರಜಾಪ್ರಭುತ್ವದ ಮಾದರಿಯೇ ಹೀಗಿದೆ; 'ಜನರಿಂದ ಜನರಿಗಾಗಿ, ಜನರಿಗೋಸ್ಕರ' ಆದರೆ ಯಾವ ಜನ ಎಂದು ಕೇಳಿದರೆ ವಿವರಿಸುವುದು ತುಂಬಾ ಕಷ್ಟವೇ ಸರಿ.

ಸಾಮಾಜಿಕ ಜವಾಬ್ದಾರಿಯೆನ್ನುವ ಪ್ರಶ್ನೆಯನ್ನು ಬಂಡವಾಳವಾದವು ನಮ್ಮ ಮುಂದಿಡುವ ಆಕರ್ಷಕ ಕ್ರಮವೆಂದರೆ - ಉತ್ಪಾದನೆಯ ಹೆಚ್ಚಳ ಮತ್ತು ಸಂಪತ್ತಿನ ಕ್ರೋಢೀಕರಣ. "ಹೆಚ್ಚು ಉತ್ಪಾದಿಸಿ, ಹೆಚ್ಚು ಸಂಪತ್ತನ್ನು ಕ್ರೋಢೀಕರಿಸಿ" - ಇದರಿಂದ ದೇಶವು ಉದ್ಧಾರವಾಗುತ್ತದೆ. ದೇಶ ಉದ್ಧಾರವೆಂದರೆ ಸಂಪತ್ತಿನ ಕ್ರೋಢೀಕರಣ ಅಷ್ಟೇ. ಇದರಿಂದಾಗಿಯೇ ಬಂಡವಾಳವಾದವು ಸಾಮಾಜಿಕ ಜವಾಬ್ದಾರಿಯೆನ್ನುವುದನ್ನು ನಿರ್ವಚಿಸುವ ಕ್ರಮ ಬೇರೆ. ಬಂಡವಾಳವಾದವು ಉತ್ಪಾದನೆಯ ಹೆಚ್ಚಳಕ್ಕಾಗಿಯೇ ಅಪರಿಮಿತವಾದ ಗಮನವನ್ನು ಹರಿಸುತ್ತದೆ. ತನ್ನೆಲ್ಲಾ ತಾಂತ್ರಿಕ ಕುಶಲತೆಯ ಕಡೆಗೆ ದೃಷ್ಟಿಯನ್ನಿಡುತ್ತದೆ. ಅದಕ್ಕೊಂದು ಲಕ್ಷ್ಮಣರೇಖೆಯಿದೆ. ವಾಸ್ತವವಾಗಿ ನಮ್ಮ ದೇಶದ ಈಚಿನ ವಿದ್ಯಮಾನವನ್ನು ಗಮನಿಸಿ; ತಾಂತ್ರಿಕ ವಿಶ್ವವಿದ್ಯಾಲಯಗಳು; ಕಂಪ್ಯೂಟರ್ ಕೋರ್ಸ್‌ಗಳು; ವೈದ್ಯಕೀಯ ಶಿಕ್ಷಣ ಸಂಸ್ಥೆಗಳು, ಎಲ್ಲವೂ ಮನುಷ್ಯರನ್ನು ಒಂದು ತಕ್ಕಡಿಯಲ್ಲಿಟ್ಟು ತೂಗುತ್ತಿವೆ. ಮನುಷ್ಯನ ಮನಸ್ಸು ಕೂಡಾ ಈ ತಕ್ಕಡಿಯಲ್ಲಿ ತೂಗುವ ವಸ್ತು ಆಗಿಬಿಟ್ಟಿದೆ. ಇದರಾಚೆಗೆ ಬೇರೊಂದು ಜಗತ್ತು ಇಲ್ಲ. ಸಮಾಜವಾದಿ ಚಿಂತನೆಯ ಕ್ರಮವನ್ನು ನೋಡಿ : ಇದು ಸಮಾನ ವೇತನ, ಸಮಾನ ಹಂಚಿಕೆಯ ವಿಷಯಗಳ ಬಗ್ಗೆ ಮಾತಾಡುತ್ತದೆ. ಇದು ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯನ್ನು ನೋಡುವುದೇ ಬೇರೆ ರೀತಿಯಲ್ಲಿ. ಹೀಗಾಗಿಯೇ ಸಾಮಾಜಿಕ ಜವಾಬ್ದಾರಿಯೆನ್ನುವುದು ಒಂದು ರೀತಿಯಲ್ಲಿ ತಾತ್ವಿಕ ಸಮಸ್ಯೆಯೇ ಹೊರತು ಯಾವುದೋ ಒಂದು 'ರೂಪ'ಕ್ಕೆ ಸಂಬಂಧಿಸಿದ ಪ್ರಶ್ನೆಯಲ್ಲ. ಹಾಗೆಯೇ ಕೇವಲ ಒಂದು ಮಾಧ್ಯಮಕ್ಕೆ ಸಂಬಂಧಿಸಿದ ಪ್ರಶ್ನೆಯೂ ಅಲ್ಲ. ಜನರಿಗಾಗಿ ಹೋರಾಡುವುದು ಸಾಮಾಜಿಕ ಜವಾಬ್ದಾರಿಯೆಂದು ನಾವು ತಿಳಿದುಕೊಂಡಿದ್ದೇವೆ. ಆದರೆ, ತಾತ್ವಿಕ ಸ್ಪಷ್ಟತೆಯಿಲ್ಲದೆ ನಡೆಸುವ ಯಾವ ಹೋರಾಟವೂ ಸಾಮಾಜಿಕ ಜವಾಬ್ದಾರಿಯ ಹೋರಾಟವೆಂದು ಅನ್ನಿಸುವುದಿಲ್ಲ. ಪ್ರಚಾರಣ ಮತ್ತು ಪ್ರಚಾರದ ಆಸೆಗಾಗಿ ನಡೆಸುವ ಹೋರಾಟಕ್ಕೆ ಸ್ವಯಂಪ್ರತಿಷ್ಠೆಯ ಅಹಂಕಾರವಿರುತ್ತದೆಯೇ ಹೊರತು ಅದರಿಂದ ಸಾಮಾಜಿಕ ನ್ಯಾಯವು ದೊರೆಯುವುದಿಲ್ಲ. ಹೋರಾಟವನ್ನು ನಡೆಸುವುದಕ್ಕಾಗಿಯೇ ಯಾವುದಾದರೂ ಏಜನ್ಸಿಗಳು ದುಡ್ಡು ಕೊಡುತ್ತಾರೆಂದರೆ ಹೋರಾಟ ಯಶಸ್ವಿಯಾಗಲು ಸಾಧ್ಯವೇ ? ಯಾರನ್ನೋ ಅವಲಂಬಿಸಿಕೊಂಡು ನಡೆಸುವ

ಹೋರಾಟವು ಈ ಅರ್ಥದಲ್ಲಿ ಸಾಮಾಜಿಕ ಜವಾಬ್ದಾರಿಯದು ಎಂದು ನಾವು ಕರೆಯಲು ಶುರುಮಾಡಿದರೆ ಸಾಮಾಜಿಕ ಜವಾಬ್ದಾರಿಯೆನ್ನುವುದಕ್ಕೆ ಯಾವ ಅರ್ಥಗಳೂ ಇಲ್ಲ.

ತಂದೆಗೆ ಮಕ್ಕಳ ಜವಾಬ್ದಾರಿ; ಮೇಷ್ಟ್ರಿಗೆ ವಿದ್ಯಾರ್ಥಿಗಳ ಜವಾಬ್ದಾರಿ; ಕೆಲಸದ ಮೇಲಿನ ಜವಾಬ್ದಾರಿ ಅನ್ನೋ ತರ ಸಾಮಾಜಿಕ ಜವಾಬ್ದಾರಿ ಎಂದು ಕರೆಯಲು ಬರುವುದಿಲ್ಲ. ಸರಕು ಸಾಗಾಣಿಕೆಯಲ್ಲಿ ಹಚ್ಚುವ ಲೇಬಲ್‌ನಲ್ಲಿ 'Handle with care' ಅಂತ ಇರುತ್ತದೆ. ಅದೇ ತರಹ ಸಾಮಾಜಿಕ ಜವಾಬ್ದಾರಿ ಅನ್ನೋದು Handle with care ನ ಪ್ರಶ್ನೆಯಲ್ಲ.

ಇದನ್ನು ಹೇಳುವುದಕ್ಕೆ ಕಾರಣವಿಷ್ಟೆ : ನಾಗರಿಕ ಪ್ರಜೆಯೊಬ್ಬನ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯು ಒಂದು ರೀತಿಯ ನಿರ್ವಚನಕ್ಕೆ ಒಳಗಾಗುತ್ತದೆ. ಆದರೆ, ಸಮೂಹ ಮಾಧ್ಯಮಗಳ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಯು ಬೇರೊಂದು ರೀತಿಯ ನಿರ್ವಚನಕ್ಕೆ ಒಳಗಾಗುತ್ತದೆ. ಈ ಎರಡರ ನಡುವಣ ಘಾಟಿಯೇ ಬೇರೆ ಬೇರೆ ರೀತಿಯ ನಿರ್ವಹಣಾ ಕ್ರಮವನ್ನು ಅವಲಂಬಿಸಿಕೊಂಡಿರುತ್ತವೆ.

ಸಮೂಹ ಮಾಧ್ಯಮಗಳ ನಿರ್ವಹಣಾ ಕ್ರಮದ ಪ್ರಶ್ನೆಯನ್ನು ಎತ್ತಿಕೊಂಡೆ. ಇಲ್ಲಿಯೂ ಎರಡು ತಾತ್ತ್ವಿಕ ಪ್ರಶ್ನೆಗಳಿವೆ. ಮೊದಲನೆಯದು - ಸಮೂಹ, ಎರಡನೆಯದು - ಮಾಧ್ಯಮ, ಸಮೂಹ ಅನ್ನೋದನ್ನ ನಾವು 'ಜನಸಮೂಹ' ಅನ್ನುವ ಅರ್ಥದಲ್ಲಿಯೇ ಬಳಸುತ್ತಿದ್ದೇವೆ. 'ಜನಸಮೂಹ'ದ ಪ್ರಶ್ನೆಯು ಒಂದು ಸಂವಾದಿಯಾದ ಪಥ ಮಾತ್ರ. 'ಜನಸಮೂಹ'ದ ಪರಿಕಲ್ಪನೆಯು ಯಾಕೆ ಸಂವಾದಿ ಪದವಾಗಿರುತ್ತದೆಯೆಂದರೆ ಅದನ್ನು ಗುರುತಿಸುವ ಕ್ರಮವನ್ನು ಅವಲಂಬಿಸಿಕೊಂಡೇ ಅದು ರೂಪುಗೊಂಡಿರುತ್ತದೆ. "ನಾನು ನನ್ನ ಜನಸಮೂಹದ ಪ್ರತಿನಿಧಿಯಾಗಿ ಮಾತಾಡುತ್ತಿದ್ದೇನೆ" ಎಂದು ಒಬ್ಬ ರಾಜಕಾರಣಿಯು ಹೇಳುತ್ತಿದ್ದಾನೆಂದು ಇಟ್ಟುಕೊಳ್ಳಿ. ಹೀಗೆ ಹೇಳುವಾಗಲೇ ಈ 'ಜನಸಮೂಹ' ಎನ್ನುವುದಕ್ಕೆ ಒಂದು ಉದ್ದೇಶಿತ ಅರ್ಥವನ್ನು ಆ ರಾಜಕಾರಣಿಯು ಕೊಡುತ್ತಿದ್ದಾನೆ ಎಂಬ ಅರ್ಥವು ಬರುತ್ತದೆ. ಒಬ್ಬ ಲೇಖಕ "ನಾನು ನನ್ನ ಜನಸಮೂಹದ ನೋವುಗಳನ್ನು ನನ್ನ ಬರವಣಿಗೆಯಲ್ಲಿ ದಾಖಲಿಸುತ್ತಿದ್ದೇನೆ" ಎಂದು ಹೇಳುತ್ತಿದ್ದರೆ ಅದು ಅವನ ಸಾಂಸ್ಕೃತಿಕ ವಿವರಗಳನ್ನು ದಾಖಲಿಸುತ್ತದೆಯೆಂಬ ಅರ್ಥವೂ ಬರುತ್ತದೆ. 'ಸಮೂಹದ ಗ್ರಹಿಕೆ'ಯೇ ಈ ಕಾರಣದಿಂದ ಅನೇಕ ಸಂದರ್ಭದಲ್ಲಿ ಅಸ್ಪಷ್ಟ. ಸಮೂಹವೆಂಬ ಪದಕ್ಕೆ ಒಂದೇ ರೀತಿ ಗ್ರಹಿಕೆಯ ಏಕಾರ್ಥ ಪ್ರಚೋದಕ ಸ್ವರೂಪವೆನ್ನುವುದು ಇಲ್ಲ.

"ಮಾಧ್ಯಮ" ಎನ್ನುವುದನ್ನು ನೋಡಿ - ಈ ಮಾಧ್ಯಮವೆಂಬ ಪದಕ್ಕೂ "ಸಂವಹನ" ವೆಂಬ ಗ್ರಹಿಕೆಗಳು ಇವೆ. ಜನಸಮೂಹದ ಎದುರುಗಡೆ ನಿಂತುಕೊಂಡು ಮಾತಾಡುವುದು ಒಂದು ರೀತಿಯ ಸಂವಹನದ ಸಾಧ್ಯತೆಯಾಗಿರುತ್ತದೆ. ಇದರಲ್ಲಿ "ಸಂವಹನ"ವೆಂದರೆ ಅದು ಭಾಷಣವಾಗಬಹುದು : ಇಲ್ಲವೇ ಬೇರೆ ಯಾವುದೇ ರೀತಿಯ ಮಾತುಗಳಾಗಬಹುದು. ಅದು ಜನರಿಗೆ ತಲುಪಿದರೆ ಆಯಿತು.

ನಮಗೆ ಈ ರೇಡಿಯೋ, ಪತ್ರಿಕೆಗಳು; ದೂರದರ್ಶನ ಪರಿಚಯವಾಗುವುದಕ್ಕೆ ಮೊದಲೇ 'ಜನಸಮೂಹಕ್ಕೆ' ವಿಷಯವನ್ನು ತಿಳಿಸಲು ಬಳಸಿಕೊಂಡ "ಮಾಧ್ಯಮ" ಬೇರೆಯ ಮಾದರಿಯನ್ನು ಒಳಗೊಂಡಿದ್ದವು. ದಕ್ಷಿಣ ಕನ್ನಡದಲ್ಲಿ 'ಯಕ್ಷಗಾನ ಬಯಲಾಟ'ವನ್ನು

ನೋಡಿ : ಈ ರಂಗಭೂಮಿಯು ಒಂದು ನಿರ್ದಿಷ್ಟ ವಿಷಯವನ್ನು ಹೇಳುವುದಕ್ಕೆ ಇಡಿಯ ರಂಗಭೂಮಿಯ ತಂತ್ರಗಾರಿಕೆಯನ್ನು ಬಳಸಿಕೊಳ್ಳುತ್ತದೆ. ಒಂದು ಯಕ್ಷಗಾನ ಬಯಲಾಟಕ್ಕೆ ಸಾವಿರಾರು ಸಂಖ್ಯೆಯ ಜನರು ಸೇರಿಕೊಳ್ಳುತ್ತಾರೆ. ಈ ಯಕ್ಷಗಾನ ರಂಗಭೂಮಿಯು ಎಷ್ಟು ಶಕ್ತವಾದ ಮಾಧ್ಯಮವೆಂದರೆ - ಅವರಲ್ಲಿನ 'ಸ್ಥಿತಿಸ್ಥಾಪಕತ್ವ'ದ ಗುಣದಿಂದಾಗಿ ಯಾವ ವಿಷಯವನ್ನು ಕೂಡಾ ಹೇಗೆ ಬೇಕಾದರೂ ಬಳಸುವುದಕ್ಕೆ ಸಾಧ್ಯ. ಆಧುನಿಕ ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರವನ್ನು ಯಾವ ರೀತಿಯಲ್ಲೂ ಬಳಸುವುದಕ್ಕೂ ಸಾಧ್ಯ, ಅದೇ ರೀತಿಯಲ್ಲಿ 'ಪುರಾಣವಾಚನ' (ದಕ್ಷಿಣ ಕನ್ನಡದಲ್ಲಿ ಹಳೆಗನ್ನಡ ಕಾವ್ಯಗಳ ಓದು ಮತ್ತು ಅರ್ಥ ವಿವರಣೆ) ಮತ್ತು 'ಹರಿಕತೆ'ಯೆಂಬಂಥ ಕಾರ್ಯಕ್ರಮಗಳು ಈ ಕೆಲಸವನ್ನು ಮಾಡುತ್ತಿದ್ದವು. ಮತ್ತೊಂದು ವಿಷಯವೆಂದರೆ ಈ ರೀತಿಯ 'ರೂಪಗಳು' ಒಂದು ರೀತಿಯಲ್ಲಿ ಒಂದು 'ಸಂಸ್ಕೃತಿ'ಯ ಪ್ರಚಾರವನ್ನೇ ವ್ಯವಸ್ಥಿತವಾಗಿ ಮಾಡುತ್ತಿದ್ದವು. ಇದನ್ನು ಒಂದು 'ಸಂಸ್ಕೃತಿ'ಯೆಂದು ಕರೆದೆ : ಯಾಕೆಂದರೆ ಈ ರೀತಿಯ ರೂಪಗಳಲ್ಲಿ ಸಂವಾದ ಒಂದು ಚೌಕಟ್ಟನ್ನು ಒಳಗೊಂಡಿದ್ದವು ಮಾತ್ರ. 'ಯಕ್ಷಗಾನ', 'ಪುರಾಣವಾಚನ', 'ಹರಿಕತೆ' ಮುಂತಾದವು ಒಂದು ವರ್ಗದ ಹಿತಾಸಕ್ತಿಗಾಗಿ ರೂಪುಗೊಂಡ ಮಾಧ್ಯಮಗಳು. ಯಕ್ಷಗಾನದಲ್ಲಿ ಎತ್ತಿಹಿಡಿದ ಮೌಲ್ಯಗಳೆಲ್ಲಾ - ಮುಖ್ಯವಾಗಿ ಪುರೋಹಿತಶಾಹಿ ಸಂಸ್ಕೃತಿಯ ಪರವಾಗಿ ನಿಂತ ಮೌಲ್ಯಗಳೇ ಆಗಿರುವುದರಿಂದ, ಅದಕ್ಕೆ ಅನುಗುಣವಾದ 'ವರ್ಣಾಶ್ರಮ ಧರ್ಮ' ಇತ್ಯಾದಿ ಪರಿಭಾಷೆಗಳೇ ಅದರಲ್ಲಿ ಕೆಲಸ ಮಾಡಿದವು. ಜಮೀನುದಾರಿ ಪದ್ಧತಿಯ ಸಮಾಜದಲ್ಲಿ ಮತ್ತು ಅನಕ್ಷರಸ್ಥರ ನಡುವೆ ಈ ತರಹದ ಮಾಧ್ಯಮಗಳು ಒಂದು ರೀತಿಯ ಪರಿಣಾಮವನ್ನು ಬೀರುತ್ತವೆ. ಪುರಾಣವಾಚನವೆಂದರೆ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕುಮಾರವ್ಯಾಸ; ಲಕ್ಷ್ಮೀಶರ ಕಾವ್ಯಗಳೇ ಮುಖ್ಯವಾದುದು ಕುತೂಹಲದಾಯಕ. ಯಕ್ಷಗಾನ, ಹರಿಕತೆ, ಪುರಾಣವಾಚನದಂಥ ಸಂವಹನರೂಪಗಳನ್ನು ಅವುಗಳ ರೂಪದಿಂದಲೇ ನಾವು ಜನವಿರೋಧಿ ಹಾಗೂ ನಿಷ್ಪ್ರಯೋಜಕ ಕಲೆಗಳೆಂದು ಕರೆಯುವುದು ಕಷ್ಟ. ಅಮೃತ ಸೋಮೇಶ್ವರರಂಥ ವಿದ್ವಾಂಸರು ಈ ರೀತಿಯ ಯಕ್ಷಗಾನದ ರೂಪಗಳಿಗೆ ಹೊಸ ಅರ್ಥಗಳನ್ನು ತುಂಬಿಕೊಟ್ಟಿದ್ದಾರೆ. ಅದು ಮಹತ್ತ್ವದ ಕೆಲಸ. ಈಗ ಉದಾಹರಿಸಿದ ಈ ರೀತಿಯ ಕಲೆಯ ಮಾಧ್ಯಮದಲ್ಲಿ ಹೊಸದೊಂದು ಜೀವಕಲೆಯು ಸಾಧ್ಯವಿದೆ ಮತ್ತು ಈ ಮಾಧ್ಯಮಗಳು ಜನರನ್ನು ಹಿಡಿದಿರಿಸಿದ್ದು ಅದರ ಸಂವಹನದ ಹೊಸದೊಂದು ಸಾಧ್ಯತೆಯ ದೆಸೆಯಿಂದ. ಈಗ ಈ ರೀತಿಯ ಯಾವುದೇ ಮಾಧ್ಯಮಗಳ ಬದಲಿಗೆ ಹೊಸ ಸಮೂಹ ಮಾಧ್ಯಮಗಳು ಬಂದಿವೆ. ಒಂದು ಕಾಲದಲ್ಲಿ ಹೀಗಿರಲಿಲ್ಲ ಎಂದು ನೆನಪಿಸಿಕೊಳ್ಳಲು ಇದನ್ನು ಹೇಳಿದೆ. ಸಂವಹನದ ರೂಪಗಳು ಹೀಗೆ ಜನವರ್ಗಕ್ಕೆ ತಲುಪುವ ಸಂದರ್ಭದಲ್ಲಿ ಅದಕ್ಕೆ ಅನೇಕ ಸಾಧ್ಯತೆಗಳು ಇವೆ. ಸಮಾಜಕ್ಕೆ ತಲುಪುವ ಮಾಧ್ಯಮವು ಯಾವುದಾದರೂ ಸರಿ, ಅದು ಜನರನ್ನು ತಲುಪಿದರೆ ಸರಿ. ಆದರೆ, ಈಗ ಸಮೂಹ ಮಾಧ್ಯಮವೆನ್ನುವುದಕ್ಕೆ ನಿರ್ದಿಷ್ಟವಾದ ಅರ್ಥಗಳನ್ನು ಕೊಟ್ಟಿದ್ದೇವೆ. ಅದಕ್ಕೊಂದು ಸ್ವರೂಪವನ್ನು ನಿಗದಿಪಡಿಸಿದ್ದೇವೆ.

ನಾವೀಗ ಗುರುತಿಸುವ ಸಮೂಹ ಮಾಧ್ಯಮಗಳಾದ ಪತ್ರಿಕೆ, ದೂರದರ್ಶನ ಮತ್ತು ರೇಡಿಯೋ — ಈ ಮೂರೂ ಮಾಧ್ಯಮಗಳು ನಿರ್ದಿಷ್ಟವಾದ ತಾತ್ತ್ವಿಕತೆಯನ್ನು ಆಧರಿಸಿಕೊಂಡು ನಿಂತಿವೆ ಮತ್ತು ಈ ಮೂರು ಮಾಧ್ಯಮಗಳ ತರಹಗಳು ಬೇರೆ ಬೇರೆ. ಪತ್ರಿಕೆಯು ಓದುಗರನ್ನು ಅವಲಂಬಿಸಿಕೊಂಡಿದೆ. ದೂರದರ್ಶನಕ್ಕೆ ಪ್ರೇಕ್ಷಕರು ಬೇಕು. ಕೇಳುಗರು ಅವಲಂಬಿಸುವುದು ರೇಡಿಯೋವನ್ನು. ಪತ್ರಿಕೆಗಳು ಪೂರ್ತಿಯಾಗಿ ಅಕ್ಷರಸ್ಥರನ್ನು ಅವಲಂಬಿಸಿಕೊಂಡು ರೂಪುಗೊಂಡಿವೆ. ದಿನಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು ಹಾಗೂ ಸಾಹಿತ್ಯಿಕ ಪತ್ರಿಕೆಗಳೆಂಬ ವರ್ಗೀಕರಣಗಳು ಈ ತಾತ್ತ್ವಿಕತೆಯ ಮೇಲೆ ರೂಪುಗೊಂಡಿವೆ. ಪ್ರತಿಯೊಂದು ಪತ್ರಿಕೆಗೆ ಸಂಪಾದಕರು ಇರುತ್ತಾರೆ. ಸಂಪಾದಕರ ಮರ್ಜಿಗೆ ಅನುಸಾರವಾಗಿ ಈ ಪತ್ರಿಕೆಗಳ ವಿನ್ಯಾಸಗಳು ರೂಪುಗೊಳ್ಳುತ್ತವೆ.

ದೂರದರ್ಶನಕ್ಕೆ ನಿರ್ದೇಶಕರು; ಆಕಾಶವಾಣಿಗೆ ನಿಲಯ ನಿರ್ದೇಶಕರು ಇರುತ್ತಾರೆ. ಇವೆಲ್ಲದರ ಕಾರ್ಯಕ್ರಮ ಸ್ವರೂಪಗಳು ಬೇರೆ ಮತ್ತು ಇವು ಜನರನ್ನು ಸಂಪರ್ಕಿಸುವ ವಿಧಾನಗಳು ಬೇರೆ ಬೇರೆ. ನಮ್ಮ ಬಹುದೊಡ್ಡ ಮಾಧ್ಯಮಗಳಾದ ಇವುಗಳು ಒಂದೊಂದು ರೀತಿಯ ತಾತ್ತ್ವಿಕತೆಯನ್ನು ಆಧರಿಸಿಕೊಂಡು ನಿಂತಿವೆ. ಆದರೆ ಪತ್ರಿಕೆಗಳನ್ನು ಹೊರತುಪಡಿಸಿ ಉಳಿದೆರಡು ಮಾಧ್ಯಮಗಳು ತೀರಾ ಈಚಿನ ವರೆಗೂ ಸ್ವತಂತ್ರ ಮಾಧ್ಯಮಗಳೇನೂ ಅಲ್ಲ. ಆಕಾಶವಾಣಿಯಲ್ಲಿ ಮಾತಾಡುವುದೂ ಕೂಡಾ ಸೆನ್ಸಾರ್‌ಶಿಪ್‌ಗೆ ಒಳಗಾಯಿತು. ಆಳುವ ಸರ್ಕಾರವನ್ನು ಟೀಕಿಸಬಾರದು; ಜನರ ಭಾವನೆಗಳನ್ನು ಕೆದಕಬಾರದು — ಇತ್ಯಾದಿಗಳಿಂದ ನಮ್ಮೆಲ್ಲರ ಮಾತು ಮಾಧ್ಯಮದ ಹಿಡಿತಕ್ಕೆ ಒಳಗಾಯಿತು.

ಈ ಮೂರು ರೀತಿಯ ಪ್ರಬಲ ಸಮೂಹ ಮಾಧ್ಯಮಗಳಲ್ಲಿ ಒಂದೊಂದು ಮಾಧ್ಯಮವೂ ಅದರದೇ ಆದ ರೀತಿ ರಿವಾಜುಗಳನ್ನು ಒಳಗೊಂಡಿದೆ. ಇದರಲ್ಲಿ ಪತ್ರಿಕೆಗಳು ಅಕ್ಷರಸ್ಥರ ಸೊತ್ತು. ಯಾಕೆಂದರೆ ಅವು ಮಾತಾಡುವುದೇ ಅಕ್ಷರಗಳ ಮುಖಾಂತರ. ಇದಕ್ಕೆ ಬೇಕಾಗುವ 'ಓದುಗರು' ನಿಜವಾಗಿಯೂ ಎಲ್ಲರ ವರ್ಗಕ್ಕೆ ಸೇರಿದವರಲ್ಲ. ಪತ್ರಿಕೆಗಳನ್ನು ಓದುವವರಲ್ಲಿಯೂ ಕೆಲವು ಮನೋಭಾವ ಅಂತರ್ಗತವಾಗುತ್ತದೆ. ದಿನಪತ್ರಿಕೆಗಳನ್ನು ಓದುವವರಲ್ಲಿಯೂ ಅನೇಕ ಸಂದರ್ಭದಲ್ಲಿ ದಿನನಿತ್ಯದ ಸುದ್ದಿಯ ಬಗ್ಗೆ ಕುತೂಹಲ ಉಳ್ಳವರಾಗಿರುತ್ತಾರೆ. ಅನೇಕ ಮಧ್ಯಮ ವರ್ಗದ ಜನರಿಗೆ ಈ ದಿನನಿತ್ಯದ ಸುದ್ದಿಯು ಮುಖ್ಯವಾಗದೇ ಹೋಗಬಹುದು. ಯಾರಿಗೆ ಬೇಕು ಈ ರಾಜಕೀಯ, ಅವರು ಆ ಪಕ್ಷಕ್ಕೆ ರಾಜೀನಾಮೆ ಕೊಟ್ಟರು, ಈ ಪಕ್ಷಕ್ಕೆ ರಾಜೀನಾಮೆ ಕೊಟ್ಟರು ಎಂಬಂಥ ಸುದ್ದಿಯಿಂದ ನಮಗೇನು ಪ್ರಯೋಜನ ಎಂದು ಕೆಲವರು ಭಾವಿಸುತ್ತಾರೆ. ಅಷ್ಟೇ ಅಲ್ಲ, ಪತ್ರಿಕೆಯನ್ನು ಓದುವಾಗಲೂ ಕೆಲವರು ನಿರ್ದಿಷ್ಟ ಪತ್ರಿಕೆಯನ್ನೇ ಓದುತ್ತಾರೆ. ಅದು ಅವರವರ ಅಭ್ಯಾಸಕ್ಕೆ ಮತ್ತು ಅಭಿರುಚಿಗೆ ತಕ್ಕ ಹಾಗೆ ಇರುತ್ತದೆ. ವಾಸ್ತವವಾಗಿ ದಿನಪತ್ರಿಕೆಗಳ ಮುಖ್ಯ ಉದ್ದೇಶ ಸುದ್ದಿ ಮಾಹಿತಿಯನ್ನು ಜನರಿಗೆ ತಲುಪಿಸುವುದು. ಆದರೆ ಸುದ್ದಿಯನ್ನು ಜನರಿಗೆ ತಲುಪಿಸುವಾಗಲೂ ಪ್ರತಿಯೊಂದು ಪತ್ರಿಕೆಯೂ ಅದರದೇ ಆದ ಮಾದರಿಯನ್ನು ಒಳಗೊಂಡಿರುತ್ತದೆ. ಪತ್ರಿಕೆಯನ್ನು ಓದುವ ಜನರು ಆ ಪತ್ರಿಕೆಯ ಸ್ವಭಾವಕ್ಕೆ ತಮ್ಮನ್ನು

ಅಂಟಿಸಿಕೊಂಡು ಬಿಡುತ್ತಾರೆ. ಉದಾಹರಣೆಗೆ, ಪ್ರಜಾವಾಣಿಯನ್ನು ಓದಿ ಅಭ್ಯಾಸವಾದವರು ಅದನ್ನು ಓದದೇ ಇದ್ದರೆ ಏನನ್ನೊ ಕಳೆದುಕೊಂಡವರಂತೆ ಚಡಪಡಿಸುತ್ತಾರೆ. ಬೇರೆ ಪತ್ರಿಕೆಯು ಹೇಳುವ ಸುದ್ದಿಯು ಆಯಾ ಓದುಗರಿಗೆ ಸಾಕಾಗುವುದಿಲ್ಲವೇ ? ಯಾಕೆ ಅಷ್ಟೊಂದು ಚಡಪಡಿಸುತ್ತಾರೆ ಎಂದು ಕೇಳಬಹುದು. ಪ್ರಜಾವಾಣಿಯ ಬದಲಿಗೆ ಕನ್ನಡಪ್ರಭ : ಕನ್ನಡಪ್ರಭದ ಬದಲಿಗೆ ಸಂಯುಕ್ತ ಕರ್ನಾಟಕ : ಸಂಯುಕ್ತ ಕರ್ನಾಟಕದ ಬದಲಿಗೆ ಉದಯವಾಣಿ ಎಂದು ನಾವೇನೋ ಸುಲಭದಲ್ಲಿ ಹೇಳಬಹುದು. ಆದರೆ ಪತ್ರಿಕೆಯನ್ನು ಓದುವ ವಿಷಯದಲ್ಲಿ "ಬದಲಿಗೆ" ಎನ್ನುವುದಕ್ಕೆ ಯಾವುದೇ ಅರ್ಥಗಳಿಲ್ಲ. "ಚಹದ ಬದಲಿಗೆ ಕಾಫಿ : ಕಾಫಿಯ ಬದಲಿಗೆ ಬೂಸ್ಟ್ : ಬೂಸ್ಟ್‌ನ ಬದಲಿಗೆ ಹಾರ್ಲಿಕ್ಸ್" ಎಂದು ಹೇಳುವುದು ಸುಲಭವಲ್ಲ. ಬಸ್ಸುಗಳನ್ನು "ಬದಲಿಗೆ" ಎಂದು ಓಡಿಸಬಹುದು. ಆದರೆ "ಓದನ್ನು" ಬದಲಿಗೆ ಎಂದು ಹೇಳುವುದು ತುಂಬಾ ಕಷ್ಟ.

ಇದಕ್ಕಾಗಿಯೇ ಪತ್ರಿಕೆಗಳಿಗೆ ನಾವು ಅಷ್ಟೊಂದು ಅಂಟಿಕೊಂಡಿರುತ್ತೇವೆ. ಪತ್ರಿಕೆಯು ಸಿಕ್ಕಿಲ್ಲವೆಂದರೆ ಅಷ್ಟೊಂದು ಚಡಪಡಿಸುತ್ತೇವೆ. ಈ ಚಡಪಡಿಕೆಯು ಪತ್ರಿಕೆಗೆ ನಾವು ನಮ್ಮ ಮನಃಸ್ಥಿತಿಯನ್ನು ಹೊಂದಿಸಿಕೊಂಡಿರುವುದನ್ನು ಸೂಚಿಸುತ್ತದೆ ಮಾತ್ರವೇ ಅಲ್ಲ. ಅದರ ಮುಖಾಂತರ ಬೆಳಗಿನ ಹೊತ್ತಿನ ನಮ್ಮ ದೊಡ್ಡದೊಂದು ರಿಚುವಲ್ಲನ್ನು ನಾವು ಈಡೇರಿಸಿಕೊಂಡಿದ್ದೇವೆಂಬ ತೃಪ್ತಿಯನ್ನು ಪಟ್ಟುಕೊಳ್ಳುತ್ತೇವೆ. ವಾಸ್ತವವಾಗಿ ಒಂದು ದಿನ ಸುದ್ದಿಯನ್ನು ಓದದೇ ಇದ್ದರೂ ನಮ್ಮ ದಿನಚರಿಯಲ್ಲಿ ಬಹಳ ದೊಡ್ಡ ಬದಲಾವಣೆ ಏನೂ ಆಗುವುದಿಲ್ಲ ಮತ್ತು ದಿನಪತ್ರಿಕೆಗಳು ಕೊಡುವ ಸುದ್ದಿಗಳಿಂದ ವೈಯಕ್ತಿಕವಾಗಿ ಬಹಳ ದೊಡ್ಡ ಮಾಹಿತಿಯು ದೊರಕಿದೆಯೆಂದು ನಾವೇನೂ ತಿಳಿಯಬೇಕಿಲ್ಲ. ದಿನಪತ್ರಿಕೆಗಳು ಕೊಡುತ್ತಿರುವ ಅನೇಕ ಸುದ್ದಿಗಳು ಸಹಜವಾಗಿಯೇ ನಮ್ಮ ಸುತ್ತ-ಮುತ್ತಣ ವಿವರಗಳಿಂದ ಹೊರತಾಗಿರುವುದಂತೂ ನಿಜ. ದಿನಪತ್ರಿಕೆಗಳು 'ತಾಜಾ ಮತ್ತು ಬಿಸಿಬಿಸಿಯಾದ ಸುದ್ದಿಗಳನ್ನು' ತರುತ್ತವೆ. ದಿನಪತ್ರಿಕೆಗಳಿಗೆ "ನಮ್ಮ ಪಕ್ಕದ ಮನೆಯವನು ಹೆಂಡತಿಗೆ ಹೊಡೆದನು" ಎಂಬಂಥ ಸುದ್ದಿಗಳು ಮುಖ್ಯವಲ್ಲ; ರಾಜಕಾರಣದಲ್ಲಿ ಏನಾಗುತ್ತಿದೆ ಎಂಬಂಥ ದೊಡ್ಡ ಸಂಗತಿಗಳ ಬಗೆಗೆ ಪತ್ರಿಕೆಗಳು ಬರೆಯುತ್ತವೆ. ಸರಿಯಾದ ಮಾತಿನಲ್ಲಿ ಹೇಳಬೇಕೆಂದರೆ ದಿನಪತ್ರಿಕೆಗಳು ದೊಡ್ಡ ಮನುಷ್ಯರ ಬಗ್ಗೆ ಹೇಳುತ್ತವೆ. ನಮಗೆ ದೊಡ್ಡ ವಿಷಯದ ಬಗ್ಗೆ ಮಾಹಿತಿಯನ್ನು ಕೊಡುತ್ತವೆ. ದೊಡ್ಡ ಮನುಷ್ಯರ ಬಗ್ಗೆ ಹೇಳುವ ಸಮೂಹ ಮಾಧ್ಯಮಗಳ ಸಮಸ್ಯೆಗಳು ಬೇರೆ ಕೆಲವಿವೆ. ಸಮೂಹ ಮಾಧ್ಯಮಗಳ ಸುದ್ದಿ : ಅರಿವು : ಮನೋರಂಜನೆಯ ಆಶಯಗಳ ಮೇಲೆ ನಿಂತಿವೆ. "ಅರಿವು" ಎನ್ನುವಾಗ ಕೆಲವು ಪತ್ರಿಕೆಗಳಂತೂ ಈ ಅಂಶಗಳನ್ನೇ ಬಂಡವಾಳವನ್ನಾಗಿಯೂ ಮಾಡುತ್ತವೆ. ಉದಾಹರಣೆಗೆ, ಕೆಲವು ಪತ್ರಿಕೆಗಳು ಹೇಳಿಕೊಳ್ಳುವುದನ್ನು ನೋಡಿ : "ಕನ್ನಡ ಜಾಣ-ಜಾಣೆಯರ ಪತ್ರಿಕೆಯಿದು". ಪತ್ರಿಕೆಯು ಜಾಣ-ಜಾಣೆಯರು ಓದುವ ಪತ್ರಿಕೆಯಿದು ಎಂದು ಹೇಳಿದಾಗಲೇ ಪತ್ರಿಕೆಯು ಒಂದು ಸ್ವಯಂಘೋಷಿತ ನಿಲುವನ್ನು ತಳೆಯುತ್ತದೆ. 'A' ಸಿನಿಮಾವು ಕೇವಲ ಬುದ್ಧಿವಂತರಿಗೆ, 'ಅವಳುಡೆರಾತ್ರಿಗಳ್' ಸಿನಿಮಾವು ವಯಸ್ಕರಿಗಾಗಿ ಎಂದು ಹೇಳಿದ ಮಾದರಿಯಲ್ಲಿಯೇ ಈ

ರೀತಿಯ ಹೇಳಿಕೆಗಳು ಸಿದ್ಧವಾಗುತ್ತವೆ. ಪತ್ರಿಕೆಯನ್ನು "ಓದವಿದ್ದವರು ಜಾಣರಲ್ಲ" ಎಂಬ ಗೃಹೀತ ನಿಲುವು ಈ ಪತ್ರಿಕೆಗಳಿಗೆ ಬೇಕಾಗುತ್ತದೆ. 'ನಾವು ಜಾಣರಲ್ಲ' ಎಂದು ಹೇಳಿಕೊಳ್ಳುವುದು ಬಹಳ ಕಷ್ಟ !

ವಾಸ್ತವವಾಗಿ ಪತ್ರಿಕೆಗಳು ಹೇಳಿಕೊಳ್ಳುವ ಅರಿವು ವಿಸ್ತರಣೆ ಮತ್ತು ಸುದ್ದಿಯ ರೂಪಗಳು ವಿದ್ಯಾವಂತ ಜನತೆಗೆ ಸಂಬಂಧಿಸಿವೆ. ಆದರೆ ನಾಲ್ಕೈದು ಪುಟಗಳಿರುವ ದಿನಪತ್ರಿಕೆಗಳನ್ನು ನೋಡಿ : ಈ ದಿನಪತ್ರಿಕೆಗಳಲ್ಲಿ ಮೊದಲ ಪುಟವು ರಾಜಕೀಯ ವಿವರಗಳನ್ನು ಒಳಗೊಂಡಿರುತ್ತದೆ. ಕೊನೆಯ ಪುಟಗಳು ಕ್ರೀಡೆಯ ವಿವರವನ್ನು ಒಳಗೊಂಡಿರುತ್ತದೆ. ಭಾನುವಾರದ ಪುರವಣಿಗಳಲ್ಲಿ ಕತೆಗಳು, ಪುಸ್ತಕ ವಿಮರ್ಶೆ, ಎಳೆಯರಿಗಾಗಿ - ಇತ್ಯಾದಿಗಳು. ಈ ಸುದ್ದಿಗಳಲ್ಲಿಯೂ ವರ್ಗೀಕರಣಗಳು - ಬೆಂಗಳೂರಲ್ಲಿ ಧಾರಾಕಾರ ಮಳೆಯಾದರೆ ಅದು ಮುಖ್ಯ ಸುದ್ದಿ. ಅದುವೇ ದೂರವಾಣಿಯಾಗಲೀ, ರಸ್ತೆಯ ಸೌಲಭ್ಯವಾಗಲೀ ಯಾವುದೂ ಇಲ್ಲದಿರುವ ಹಳ್ಳಿಯೊಂದು ಮುಳುಗಿದರೂ ಅನೇಕ ಸಂದರ್ಭದಲ್ಲಿ ಸುದ್ದಿಯೇ ಆಗುವುದಿಲ್ಲ. ಇದರಿಂದ ಜನರಿಗೆ ಯಾವ ಅರಿವೂ ದೊರೆಯುವುದಿಲ್ಲ. 'ಅರಿವು' ಎನ್ನುವುದಕ್ಕೆ ಎಷ್ಟೊಂದು ಮಿತಿಗಳಿವೆ !

ಅರಿವನ್ನು ಕೊಡುತ್ತೇವೆಂದು ಹೇಳುವ ಪತ್ರಿಕೆಗಳೂ ನಮಗೆ ಒಂದು ರೀತಿಯ ಅರಿವನ್ನು ಸೋಸಿ ಕೊಡುವುದರಿಂದ 'ಪ್ರಮುಖ ಸುದ್ದಿಗಳ' ಬಗೆಗಿನ ಅರಿವು ಮಾತ್ರ ನಮಗೆ ದೊರೆಯುತ್ತದೆ. ಪತ್ರಿಕೆಯ ಸಂಪಾದಕರು ಪತ್ರಿಕೆಗಳ ಮೇಲುಸ್ತುವಾರಿ ನೋಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಪತ್ರಿಕೆಯಲ್ಲಿ ಮೂರು ರೀತಿಯ ಕೆಲಸವನ್ನು ಸಂಪಾದಕರು ಕೈಗೊಳ್ಳುತ್ತಾರೆ. ಯಾವ ಸುದ್ದಿಯು ಮುಖ್ಯ; ಯಾವ ಸುದ್ದಿಯು ಸಂಪಾದಕರ ಜವಾಬ್ದಾರಿಯೆಂದು ಹೇಳಲಾಗಿದೆ. ಪತ್ರಿಕೆಯಲ್ಲಿ ಅಭಿರುಚಿಯೆಂಬ ಸಂವಾದಿಯಾದ ಪದಗಳು ಇವೆ. ಇವನ್ನು ರೂಪಿಸುವುದು ಸಂಪಾದಕರು, ಪತ್ರಿಕೆಯನ್ನು ರೂಪಿಸುವುದು; ಸುದ್ದಿಗಳನ್ನು ಸಂಪಾದಿಸಿ, ಸಂಕಲನ ನಡೆಸುವುದು ಸಂಪಾದಕರ ಕೆಲಸ. ವಾಸ್ತವವಾಗಿ ಯಾವುದೇ ಪತ್ರಿಕೆಯನ್ನು ನೋಡಿ : ಪತ್ರಿಕೆಯು ಸಂಪಾದಕರ ಅಭಿರುಚಿ, ಆಸಕ್ತಿ ಹಾಗೂ ಮನೋಭಾವಕ್ಕೆ ಅನುಗುಣವಾಗಿ ರೂಪುಗೊಳ್ಳುತ್ತದೆ. ಪತ್ರಿಕೆಯ ಹಿನ್ನೆಲೆಯಲ್ಲಿರುವ ಈ ರೀತಿಯ ಜವಾಬ್ದಾರಿಯ ಪ್ರಶ್ನೆಯು ಒಂದು ವಲಯದ ಓದುಗರಿಗೆ ಆಪ್ತವಾಗುತ್ತದೆ. ಪತ್ರಿಕೆಗಳ ಆಸಕ್ತಿಯು ಓದುಗರ ಆಸಕ್ತಿಗೆ ಸಂಬಂಧಿಸಿಕೊಂಡಿರುವುದರಿಂದಲೇ ಓದುಗರು ಮತ್ತು ಪತ್ರಿಕೆಯ ಆಶಯಗಳು ಪರಸ್ಪರ ಸಂಧಿಸುತ್ತವೆ.

ಪತ್ರಿಕೆಯ ಭಾಷೆಯೇ ಅನೇಕ ಸಂದರ್ಭದಲ್ಲಿ ಓದುಗರ ಭಾಷೆಯೂ ಆಗಿರುತ್ತದೆ. ಭಾಷೆಯ ಜಾಡನ್ನು ಓದುಗರೂ ಅವಲಂಬಿಸುತ್ತಾರೆ. ಪತ್ರಿಕೆಯ ಭಾಷೆಯೇ ಸಾಮಾನ್ಯ ಜನರ ಭಾಷೆಯೂ ಆಗಿ ಪರಿವರ್ತನೆಗೊಳ್ಳುತ್ತದೆ. ಪತ್ರಿಕೆಯ ಭಾಷೆಯು ಈ ದೃಷ್ಟಿಯಿಂದ ಪ್ರಾದೇಶಿಕ ಭಾಷೆಯ ಮೇಲೆ ತನ್ನ ಹಿಡಿತವನ್ನು ಸ್ಥಾಪಿಸುತ್ತದೆ. ವಾಸ್ತವವಾಗಿ ಎಲ್ಲಾ ಸಮೂಹ ಮಾಧ್ಯಮಗಳು ಪ್ರಾದೇಶಿಕ ಅನನ್ಯತೆಯ ಮೇಲೆ ದಟ್ಟ ಪ್ರಭಾವವನ್ನು ಬೀರುತ್ತವೆ. ಇದರ ಮುಖಾಂತರ ಪ್ರಾದೇಶಿಕ ಅನನ್ಯತೆಯು ಒಂದು ರೀತಿಯಿಂದ ನಾಶವಾಗುತ್ತವೆ. ಯಾವುದೋ

ಒಂದು ಕೇಂದ್ರದ, ಒಂದು ಭಾಷೆಯ, ಒಂದು ವ್ಯವಹಾರದ ನಿಲುವಿನ ಮುಖಾಂತರ ಉಳಿದೆಲ್ಲಾ ಪ್ರಾದೇಶಿಕತೆಯ ಅನನ್ಯ ಗುಣಗಳ ಮೇಲೆ ಪ್ರಭಾವಿಸುವ ಸಂಗತಿಯು ಗಮನಾರ್ಹವಾಗಿದೆ.

ಅಷ್ಟೇ ಅಲ್ಲ, ಅನೇಕ ಸಂದರ್ಭದಲ್ಲಿ ಒಂದು ಪತ್ರಿಕೆಯು ಸಂಸ್ಕೃತಿಯ ಮೇಲೆ ನಿರ್ದಿಷ್ಟವಾದ "ಅನ್ವಯ"ಗಳನ್ನು ಮಾಡುತ್ತದೆ. ಪತ್ರಿಕೆಯು ಓದುಗರ ಸಂಸ್ಕೃತಿಯನ್ನು ಅವಲಂಬಿಸಿಕೊಂಡಿರುವುದರಿಂದ ಕೆಲವು ಸಮಸ್ಯೆಗಳಂತೂ ಇದ್ದೇ ಇವೆ. ಒಂದು ಪತ್ರಿಕೆಯ ಅನುಸಂಧಾನ ನಡೆಸುವ ಅಕ್ಷರಸ್ಥ ಸಂಸ್ಕೃತಿಯ ಅಭಿಪ್ರಾಯವೇ ಸಾಮಾನ್ಯ ಸಂಸ್ಕೃತಿಯ ಮಾಮೂಲಿ ಅಭಿಪ್ರಾಯಗಳನ್ನು ರೂಪಿಸುವ ಜವಾಬ್ದಾರಿಯನ್ನು ಹೊರುವುದರಿಂದ ಸಮಸ್ಯೆಗಳಾಗುತ್ತವೆ. "ಜನಸಮೂಹ"ದ ನಡುವಿನ ಜನಸಾಮಾನ್ಯರು ಈ ಹೊತ್ತಿಗೂ ಅಕ್ಷರಸ್ಥರ ಬಗೆಗೆ ಸಣ್ಣ ಅನುಮಾನ; ಗೌರವ ಮತ್ತು 'ಭಯ ಭಕ್ತಿ'ಗಳಿಂದ ಬದುಕುತ್ತಿದ್ದಾರೆ. ಇದರ ಬಗೆಗೆ ನಮಗೆ ಅರಿವಿರಬೇಕು. ಬರವಣಿಗೆಯೆನ್ನುವುದು ಹೇಗೆ ತಾತ್ತ್ವಿಕ ಪ್ರಶ್ನೆಯಾಗಿದೆಯೋ ಅದೇ ರೀತಿಯಲ್ಲಿ ಅದನ್ನು ಓದುವುದು ಮತ್ತು ಪ್ರತಿಕ್ರಿಯಿಸುವುದು ಈಗ ತಾತ್ತ್ವಿಕ ಪ್ರಶ್ನೆಯಾಗಿದೆ. ಒಂದು ಪತ್ರಿಕೆಯು ಈ ದೃಷ್ಟಿಯಿಂದ ನಮ್ಮ ಪ್ರಜಾಸತ್ತೆಯಲ್ಲಿ ಹೆಚ್ಚು ಅಧಿಕಾರಯುತವಾಗಿದೆ. ನಮ್ಮ ಮಂತ್ರಿ-ಮಹೋದಯರುಗಳು ಆಗಾಗ ನಡೆಸುವ ಪತ್ರಿಕಾಗೋಷ್ಠಿಗಳು ಕೂಡಾ ಪತ್ರಿಕೆಯು ಎಷ್ಟು ಅಧಿಕಾರಯುತ ಮಾಧ್ಯಮವಾಗಿದೆಯೆಂಬುದನ್ನು ಸೂಚಿಸುತ್ತವೆ. ರಾಜಕೀಯವಾದ ಕೇಂದ್ರಸ್ಥ ಅಧಿಕಾರವನ್ನು ಪತ್ರಿಕೆಗಳು ವಾಸ್ತವವಾಗಿ ಒಡೆಯುತ್ತವೆ ಮತ್ತು ಅಧಿಕಾರದ ಸ್ವರೂಪವನ್ನು ಪ್ರಶ್ನಿಸುತ್ತವೆ. ಎಲ್ಲೋ ಮೂಲೆಯಲ್ಲಿರುವ; ಜನಮಾನಸದಲ್ಲಿ ಅಳಿಸಿಹೋದ ಅನೇಕ ಸಂಗತಿಗಳನ್ನು ಪತ್ರಿಕೆಗಳು ಬಯಲಿಗೆಳೆಯುವ ಹಾಗೆ ಬೇರಾವ ಮಾಧ್ಯಮಗಳೂ ಬಯಲಿಗೆಳೆಯುವುದಿಲ್ಲ. ಇದರ ಬಗ್ಗೆ ಅನುಮಾನವಿಲ್ಲ. ನಮ್ಮ ಪ್ರಜಾಪ್ರಭುತ್ವದ ಮಾದರಿಯಲ್ಲಿ ನೇರವಾಗಿ ಸರ್ಕಾರದ ಹಿಡಿತವಿಲ್ಲದಿರುವ ಪತ್ರಿಕೆಗಳು ಈ ದೃಷ್ಟಿಯಿಂದ ಅಧಿಕಾರದ ಸ್ವರೂಪವನ್ನು ಭಂಜಿತಗೊಳಿಸುತ್ತವೆ.

ಆದರೆ ಕೇಂದ್ರಸ್ಥ ಅಧಿಕಾರಭಂಜನೆಯಲ್ಲಿ ಪತ್ರಿಕೆಗಳು ಯಾವುದರ ಪರ ಇವೆ ಅಥವಾ ಯಾವುದರ ಪರ ಇಲ್ಲ ಎಂಬುದನ್ನು ಇದು ಆಧರಿಸಿಕೊಂಡಿರುತ್ತದೆ. ಸುದ್ದಿಯ ರೋಚಕತೆಯಷ್ಟೇ ಅನೇಕ ಸಂದರ್ಭಗಳಲ್ಲಿ ಮುಖ್ಯವಾಗಿದೆ. ಇದನ್ನು ನಿರೂಪಿಸುವಾಗ ಪತ್ರಿಕೆಗಳ ಹಿನ್ನೆಲೆಯಲ್ಲಿ 'ಅಭಿವ್ಯಕ್ತಿ ಸ್ವಾತಂತ್ರ್ಯ' ಎನ್ನುವ ಪ್ರಶ್ನೆಯೇ ಬಹಳ ಮುಖ್ಯವಾದ ತಾತ್ತ್ವಿಕ ಭಿತ್ತಿಯಾಗಿದೆ. 'ಅಭಿವ್ಯಕ್ತಿ ಸ್ವಾತಂತ್ರ್ಯ'ವೆನ್ನುವುದು ಎರಡು ಅಲಗಿನ ಖಡ್ಗವಿದ್ದಂತೆ, ಕೊಯ್ಯುತ್ತದೆ. ಎರಡೂ ಕಡೆ ಗಾಯವಾಗುತ್ತದೆ. 'ಅಭಿವ್ಯಕ್ತಿ' ಎನ್ನುವುದನ್ನು ಯಾವ ಥರಾ ಬೇಕಾದರೂ ಬಳಸಬಹುದು.

'ಅಭಿವ್ಯಕ್ತಿ ಸ್ವಾತಂತ್ರ್ಯ' ಎನ್ನುವುದು ಸಾಮಾಜಿಕ ಕಟ್ಟುವಿಕೆಯಲ್ಲಿ ಭಾಗಿಯಾದಾಗ ಅದಕ್ಕೆ ಒಂದು ಅರ್ಥವಿರುತ್ತದೆ. ಒಂದು ವೇಳೆ ಅದು ಸಾಮಾಜಿಕ ಭಂಜನವೇ ಆದಾಗ ಅದು ಏಕಮುಖವಾಗುತ್ತದೆ. ಎರಡೂ ಅಂಶಗಳು ವಾಸ್ತವವಾಗಿ ಮೆಥಡಾಲಜಿಯ ಪ್ರಶ್ನೆಯಾಗಿರುತ್ತವೆ. ಸಾಮಾಜಿಕ ಕಟ್ಟುವಿಕೆಯನ್ನು ಮುಖ್ಯ ಉದ್ದೇಶವಾಗಿರಿಸಿಕೊಂಡ ಪತ್ರಿಕೆಗೆ ಸಾಮಾಜಿಕ ಜವಾಬ್ದಾರಿಯ ಪ್ರಶ್ನೆಗಳು ಮಾತ್ರವೇ ಮುಖ್ಯವಾಗಿರುತ್ತವೆ. ಅದು Destructive

ಆವಾಗ ಅಲ್ಲಿ ಚಾರಿತ್ರ್ಯಹನನ ಮಾತ್ರವೇ ಮುಖ್ಯ. 'ಚಾರಿತ್ರ್ಯಹನನ'ದಲ್ಲಿ ಸಾಮಾಜಿಕ ಜವಾಬ್ದಾರಿ ಇರಬಹುದು. ಅಥವಾ ಇಲ್ಲದೆಯೂ ಇರಬಹುದು. ವಾಸ್ತವವಾಗಿ ನಿರಚನಕ್ರಮವೇ ಅನೇಕ ಸಂದರ್ಭಗಳಲ್ಲಿ ಅಪಾಯಕಾರಿ. ರಚನೆಯ ಕ್ರಮವಿಲ್ಲದ ನಿರಚನ ಕ್ರಮ ಯಾವ ಉಪಯೋಗವನ್ನೂ ಕೊಡುವುದಿಲ್ಲ. ಮತ್ತು ಅದು ಸಾಮಾಜಿಕ ಜವಾಬ್ದಾರಿಯಿಂದ ಬಹಳ ಬೇಗನೆ ತಲ್ಲಣಗೊಳ್ಳುತ್ತದೆ. ಉದಾಹರಣೆಗೆ, ಲಂಕೇಶ್ ಪತ್ರಿಕೆ v/s ತೇಜಸ್ವಿ ಪ್ರಕರಣ. ಲಂಕೇಶ್ ಪತ್ರಿಕೆಯಲ್ಲಿ ತೇಜಸ್ವಿಯವರ ಬಗೆಗೆ ಬಂದ ಅಭಿಪ್ರಾಯಗಳನ್ನು ಓದಿದ ತಕ್ಷಣ ತೇಜಸ್ವಿಯವರು ಮಹಾಮುರಾಸೆಯ ಮನುಷ್ಯನೆಂದು ಅನಿಸಿತು. ತೇಜಸ್ವಿಯವರ ಉದ್ದೇಶ ಏನಿತ್ತು ಎಂಬುದರ ಬಗ್ಗೆ ನನಗೆ ಲಂಕೇಶ್ ಪತ್ರಿಕೆಯಲ್ಲಿ ಯಾವ ವಿವರವೂ ದೊರೆಯಲಿಲ್ಲ. ಆದರೆ ನಂತರ 'ಹಾಯ್ ಬೆಂಗಳೂರ್' ಪತ್ರಿಕೆಯಲ್ಲಿ ತೇಜಸ್ವಿಯವರ ಸಂದರ್ಶನ ಬಂದ ಮೇಲೆ ವಿಷಯವು ಹಾಗಲ್ಲವೆಂದು ತಿಳಿಯಿತು. ಇದು ಒಳ್ಳೆಯದೋ ಕೆಟ್ಟದ್ದೋ ಎಂದು ನಾನು ಸೂಚಿಸುತ್ತಿಲ್ಲ. ಅದರೆ 'ವಿಷಯ'ವು ಸರಿಯಾದ ಮಾಹಿತಿಯನ್ನು ಕೊಡದಿರುವುದೇ ಅಪಾಯಕಾರಿ. ಓದುಗರಾದ ನಾವು ಏನೆಂದು ತಿಳಿದುಕೊಳ್ಳಬೇಕು ? ಸಾಂಸ್ಕೃತಿಕ ವಾಗ್ವಾದಗಳಲ್ಲಿ ಭಾಗಿಯಾಗಲು ಬಯಸುವ ಪತ್ರಿಕೆಗಳು ಏಕಮುಖವಾದ ತೀರ್ಮಾನಕ್ಕೆ ಗಂಟು ಬಿದ್ದರೆ ಅದೊಂದು ಅಪಾಯಕಾರಿಯಾದ ಹೆಜ್ಜೆ. ಆದರೆ ನಮ್ಮ ದೂರದರ್ಶನ ಮತ್ತು ಆಕಾಶವಾಣಿಯ ಕತೆಗಳೇ ಬೇರೆ. ಈ ಸಮೂಹ ಮಾಧ್ಯಮಗಳು ನಮಗೆಲ್ಲಾ ಗೊತ್ತಿರುವ ಹಾಗೆ ಪತ್ರಿಕೆಗಳಷ್ಟು ಸ್ವತಂತ್ರವಲ್ಲ.

ಆಕಾಶವಾಣಿಯ ಕೆಲಸಗಳು ಹೆಚ್ಚು ಭಿನ್ನವಾದ ಪರಿಕಲ್ಪನೆಗಳನ್ನು ಒಳಗೊಂಡಿವೆ. ಪತ್ರಿಕೆಗಳು ಮುದ್ರಿತ ರೂಪವಾಗಿ ಬರುವುದರಿಂದ ಅಲ್ಲಿ ಓದುಗರು ಇಲ್ಲದಿದ್ದರೆ ಪತ್ರಿಕೆಗಳು ಜನರನ್ನು ತಲುಪುವುದೇ ಇಲ್ಲ. ಆದರೆ ಆಕಾಶವಾಣಿಯ ಕೇಂದ್ರಗಳು ಬಿತ್ತರಿಸುವ ಕಾರ್ಯಕ್ರಮಗಳು ಮುದ್ರಣ ಸಂಸ್ಕೃತಿಯ ರಹದಾರಿಯನ್ನು ಅವಲಂಬಿಸುವುದಿಲ್ಲ. ಈ ಅರ್ಥದಲ್ಲಿ ಹಳೆಯ ಸಾಂಸ್ಕೃತಿಕ ರಹದಾರಿಗಳ ಎದುರು ಹೊಸ ಸಾಂಸ್ಕೃತಿಕ ರಹದಾರಿಗಳನ್ನು ಆಕಾಶವಾಣಿಗಳು ತೆರೆದವು ಮತ್ತು ನಿಜವಾದ ಅರ್ಥದಲ್ಲಿ ಆಕಾಶವಾಣಿಯ ಕಾರ್ಯಕ್ರಮಗಳು ಪತ್ರಿಕೆಗಳನ್ನು ಹೋಲಿಸಿದರೆ ಹೆಚ್ಚು ಆಧುನಿಕವಾಗಿ ನಮ್ಮ ಜನರಿಗೆ ಕಾಣಿಸಿದವು. ಆಕಾಶವಾಣಿಯ ಕಾರ್ಯಕ್ರಮಗಳನ್ನು ಕೇಳುವುದೆಂದರೆ ಅದಕ್ಕೆ ಬರಹದ ಮಿತಿಗಳಿಲ್ಲ. ನಮ್ಮ ಹಳ್ಳಿಗಳಿಗೆ ಒಂದು ಕಾಲದಲ್ಲಿ 'ರೇಡಿಯೋ ಯಂತ್ರ' ಆಕರ್ಷಣೆಯ ಪ್ರಮುಖ ಕೇಂದ್ರವೇ ಆಗಿತ್ತು. ಆಕಾಶವಾಣಿಯ ಕಾರ್ಯಕ್ರಮದಲ್ಲಿ ಬರುವ ಚಲನಚಿತ್ರಗಳು; ಕೃಷಿರಂಗ; ಉದ್ಯೋಗವಾರ್ತೆ ಇತ್ಯಾದಿಗಳು ಒಂದು ರೀತಿಯಿಂದ ಜನರಲ್ಲಿ ಹೊಸ ಸಂಚಲನೆಯನ್ನೇ ಉಂಟುಮಾಡಿದವು. ಆಕಾಶವಾಣಿಯಲ್ಲಿ ಬರುವ 'ಚಲನಚಿತ್ರದ ಧ್ವನಿವಾಹಿನಿ'ಯನ್ನು ಕೇಳುತ್ತಲೇ ಎಲ್ಲಿ ಬೇಕೋ ಅಲ್ಲಿ ಕೆಲಸ ಮಾಡುವವರು ಈಗಲೂ ಇದ್ದಾರೆ. ರೇಡಿಯೋಕ್ಕೆ ಅಡಿಗೆಮನೆಯ ಒಳಗೂ ಪ್ರವೇಶವಿದೆ. ಪತ್ರಿಕೆಯಾಗಲೀ, ದೂರದರ್ಶನವಾಗಲೀ ಬಯಸುವ ಕೇಂದ್ರೀಕೃತ ಚಾಡು : ಗ್ರಹಿಕೆಯೆಂಬುದನ್ನು ವಾಸ್ತವವಾಗಿ ಆಕಾಶವಾಣಿಯು ಬೇಡುವುದಿಲ್ಲ.

ಕ್ರಿಕೆಟ್ ಸಂದರ್ಭದಲ್ಲಿ ಕಾಮೆಂಟರಿ ಕೇಳುವ ಹುಡುಗರನ್ನು ಗಮನಿಸಿ : ಅವರು ಅವರ ಕಿವಿಗಿಟ್ಟುಕೊಂಡ ರೇಡಿಯೋದ ಕಾಮೆಂಟರಿಯನ್ನು ಕೇಳಿ "ಸಿಕ್ಸರ್" ಎಂದು ಕಿರುಚುತ್ತಾರೆ. ಎಷ್ಟೋ ಸಾರಿ ನಾನಂತೂ ತಬ್ಬಿಬ್ಬಾಗಿದ್ದೇನೆ. ಕ್ರಿಕೆಟ್ ಗೊತ್ತಿಲ್ಲದ ನನಗೆ ಈ ರೀತಿಯ ಪ್ರತಿಕ್ರಿಯೆಗಳು ಆಶ್ಚರ್ಯವುಂಟುಮಾಡುವುದು ನಿಜವಾದರೂ, 'ಕ್ರಿಕೆಟ್' ಕಾಮೆಂಟರಿ ಎಲ್ಲರನ್ನೂ ವ್ಯಾಪಿಸಿಕೊಂಡಿರುವುದು - 'ಕಾಲ', 'ದೇಶ', 'ಪರಿಸರ'ವನ್ನು ಮೀರಿ ಅದು ತಲುಪುವುದು ಅದರ ಸಂವಹನ ಸಾಧ್ಯತೆಯನ್ನೇ ತೋರಿಸುತ್ತದೆ.

ಇದೊಂದೇ ಅಲ್ಲ. ಆಕಾಶವಾಣಿಯ ಕೇಂದ್ರಗಳಲ್ಲಿ ಬಿತ್ತರಗೊಳ್ಳುವ 'ಕೃಷಿರಂಗ'ದ ಕಾರ್ಯಕ್ರಮವನ್ನು ಕೇಳಿದರೆ ರೈತರು ಕೃಷಿಗೆ ಬರುವ ರೋಗದ ಹತೋಟಿಗೆ ಬೇರೆ ಗೊಬ್ಬರಗಳನ್ನು ಬಳಸಬಲ್ಲರು, ನಮ್ಮ ವಾಚುಗಳು ತೋರಿಸುವ ಸಮಯವನ್ನು ಆಕಾಶವಾಣಿಯ ಸಮಯಕ್ಕೆ ಸರಿಯಾಗಿ ಹೊಂದಿಸಬಲ್ಲವು. ಇದೆಲ್ಲದರ ಪರಿಣಾಮವೆಂದರೆ, ಸಮಯ ಸಮೇತವಾಗಿ ಎಲ್ಲವೂ ನಮಗೆ ಆಕಾಶವಾಣಿಯ ತರಹವೇ ಇರುತ್ತದೆ. ಆಕಾಶವಾಣಿಯಂಥ ಸಮೂಹ ಮಾಧ್ಯಮ ಈ ಮುಖೇನ ಪರ್ಯಾಯವಾದ ಅಭ್ಯಾಸಕ್ರಮ ವೊಂದನ್ನು ನಮ್ಮಲ್ಲಿ ರೂಪಿಸಿತು ಎಂಬುದಂತೂ ನಿಜ.

ಆದರೆ ಆಕಾಶವಾಣಿಯು ಹೇಳುವ ಸುದ್ದಿಗಳಲ್ಲಿಯೂ ನಾವು ವಾಸ್ತವವಾಗಿ ಭಾಗಿಯಾಗುತ್ತೇವೆ. ಆಕಾಶವಾಣಿಯ ಸಮಾಚಾರವನ್ನು ಕೇಳುವುದನ್ನು ನಮ್ಮ ದೈನಂದಿನ ಆಚರಣೆಯ ಒಂದು ಭಾಗವಾಗಿ ಅಂಗೀಕರಿಸುತ್ತೇವೆ. ಇದು ಮುಖ್ಯವಾದುದು ಕೂಡಾ. ಇದನ್ನು ಆಕಾಶವಾಣಿಯ ಸುದ್ದಿಸಮಾಚಾರದ ಸಮಸ್ಯೆಯೆಂದು ಹೇಳುತ್ತಿಲ್ಲ. ಯಾವುದೇ ಸುದ್ದಿಮಾಧ್ಯಮಗಳು ಕೂಡಾ ನಮ್ಮಲ್ಲಿ ಒಂದು ಅಭಿಪ್ರಾಯವನ್ನು ಮೂಡಿಸುತ್ತವೆ ಮತ್ತು ಸುದ್ದಿ ಸಮಾಚಾರ ಗ್ರಹಿಕೆಯ ಮುಖಾಂತರ ನಾವೂ ಅದರಲ್ಲಿ ಭಾಗಿಯಾಗಿದ್ದೇವೆ ಎಂದು ಭಾವಿಸುತ್ತೇವೆ. ಹೀಗಾಗಿಯೇ ಆಕಾಶವಾಣಿಯಲ್ಲಿ ಬರುವ ಅನೇಕ ಸುದ್ದಿಗಳು 'ಅಧಿಕಾರ' ಮತ್ತು 'ರಾಜಕಾರಣ'ದ ನಡುವಣ ಸಂಬಂಧಗಳಿಗೆ ಒಂದು ನಿರ್ದಿಷ್ಟವಾದ ವ್ಯಾಖ್ಯೆಯನ್ನು ಕೊಡುತ್ತವೆ. ಇದರ ಮುಖಾಂತರ ಹೊಸ ರೀತಿಯ ಸಾಮಾಜಿಕ ಸಂಬಂಧಗಳನ್ನು ರೂಪಿಸುವುದಕ್ಕೆ ಪ್ರಯತ್ನಿಸುತ್ತವೆ. ಆಕಾಶವಾಣಿಯ ಅನೇಕ 'ಜನಪ್ರಿಯ ಕಾರ್ಯಕ್ರಮ'ಗಳ ಹಿಂದಿರುವ ಪ್ರಮುಖ ಆಸಕ್ತಿಯಿರುವುದೇ -'ಹೊಸ ಸಾಮಾಜಿಕ ಸಂರಚನೆ'ಯನ್ನು ರೂಪಿಸುವುದು. ಸಾಮಾಜಿಕ ಜವಾಬ್ದಾರಿಯ ಪ್ರಶ್ನೆ ಬಂದಾಗ ಆಕಾಶವಾಣಿಯು ಎಲ್ಲರಿಗೂ ತಲುಪುವ ಮಾಧ್ಯಮವಾಗಿರುವುದರಿಂದ ಬೇರೆ ತಾತ್ತ್ವಿಕತೆಯನ್ನು ರೂಪಿಸುತ್ತದೆಯೆಂಬುದಂತೂ ನಿಜ.

ದೂರದರ್ಶನಗಳದೂ ಮತ್ತೊಂದು ಸಮಸ್ಯೆ. ದೂರದರ್ಶನಗಳು ಬಂದಾಗ ನಮಗೆಲ್ಲಾ ಒಂದು ರೀತಿಯ ಸಂಭ್ರಮವಾದುದಂತೂ ನಿಜ. ಎಂಥಾ ಕಾರ್ಯಕ್ರಮಗಳೇ ಆಗಲಿ, ಅವನ್ನು ನೋಡುವುದು 'ಕಿರುತೆರೆ'ಯು ನಮ್ಮಲ್ಲಿ ಸೃಷ್ಟಿಸಿದ ಹೊಸ ಭ್ರಮೆಯ ಉತ್ಪಾದನೆಯೇ ಆಗಿತ್ತು. ದೂರದರ್ಶನ ಸೃಷ್ಟಿಸಿದ ಹೊಸ ಪ್ರತೀಕ ಸೆಳೆತವು ನಮ್ಮಲ್ಲಿ ಹೊಸ ರೀತಿಯ ಅರಿವನ್ನು ಮೂಡಿಸಿದ್ದಂತೂ ನಿಜ. ಈಗ ಟಿ.ವಿ.ಯಲ್ಲಿ ಅನೇಕ ಚಾನೆಲ್‌ಗಳು ಬರುವುದರಿಂದ ನಮಗಂತೂ 'ನ್ಯೂಯಾರ್ಕ್', 'ಲಂಡನ್'ಗಳು ಬಹಳ ಹತ್ತಿರವಾಗಿವೆ. ಸ್ಟಾರ್ ಟಿ.ವಿ.ಯಲ್ಲಿ

ಬರುವ 'Bold and Beautiful', 'Baywatch' ಬಹಳ ಆಪ್ತವಾಗಿವೆ. ಅವರ ಜೊತೆಗೆ ನಾವು 'ರಾಮಾಯಣ', 'ಮಹಾಭಾರತ'ಗಳನ್ನೂ ದೂರದರ್ಶನವಲ್ಲಿ ನೋಡುತ್ತೇವೆ. ಎಳೆಯ ಮಕ್ಕಳಿಂದ ಶುರುಮಾಡಿ ಅರುವತ್ತರ ಅಂಚಿನಲ್ಲಿರುವವರೂ ದೂರದರ್ಶನದ ಆತ್ಮೀಯರೇ ಆಗಿದ್ದಾರೆ. ಇದರ ಆಕರ್ಷಣೆಯು ದೊಡ್ಡದು. ದೂರದರ್ಶನ ಕಾರ್ಯಕ್ರಮಕ್ಕಾಗಿ ನಾವು ನೆಂಟರನ್ನು ಕಳಕೊಳ್ಳಬಲ್ಲೆವು. ಜನಪ್ರಿಯ ಧಾರಾವಾಹಿ ನೋಡುವ ಸಂದರ್ಭದಲ್ಲಿ ನಮ್ಮ ಮನೆಗೆ ಯಾರಾದರೂ ಬಂದರೆ ನಮಗೆ ಕಿರಿಕಿರಿಯುಂಟಾಗುತ್ತದೆ.

ದೂರದರ್ಶನದಲ್ಲಿರುವ 'ನಾಟಕೀಯ ಅಭಿವ್ಯಕ್ತಿ'ಯೂ ಕೂಡಾ ಒಂದು ರೀತಿಯ ಸಮತಲದ ಪ್ರತೀಕಗಳನ್ನು ಕಾಪಾಡಿಕೊಂಡು ಬರುತ್ತದೆ. ದೃಶ್ಯಮಾಧ್ಯಮವು ನಮ್ಮನ್ನು ಬೇರೆ ಬೇರೆ ರೀತಿಯಲ್ಲಿ ಆವರಿಸಿಕೊಳ್ಳುತ್ತದೆ. ಈಗಂತೂ ಟಿ.ವಿ.ಯು ಪ್ರಮುಖವಾದ ಸಮೂಹ ಮಾಧ್ಯಮವಾಗಿದ್ದು ಅದಕ್ಕೊಂದು ಸ್ಥಾನವು ಕಲ್ಪಿತವಾಗಿದೆ. ಟಿ.ವಿ.ಯು ಹೊಸ ರೀತಿಯ ಸಾಂಸ್ಕೃತಿಕ ಪರಿಕಲ್ಪನೆಗಳನ್ನು ನಮ್ಮ ಮುಂದೆ ಇಡುತ್ತದೆ. ಈ ರೀತಿಯ ಸಾಂಸ್ಕೃತಿಕ ಪರಿಕಲ್ಪನೆಗಳ ಪ್ರಭಾವವು ದೊಡ್ಡದು.

ಸಮೂಹ ಮಾಧ್ಯಮಗಳು ನಾವು ಗ್ರಹಿಸಿದಷ್ಟು ಸರಳವಲ್ಲ ಮತ್ತು ಅವು ಆಧುನಿಕ ಜಗತ್ತಿನಲ್ಲಿ ಅತ್ಯಂತ ಪರಿಣಾಮಕಾರಿಯಾದ ಸಾಧನಗಳಾಗಿವೆ. ಸಮೂಹ ಮಾಧ್ಯಮಗಳು ಪ್ರಾದೇಶಿಕ ವೈವಿಧ್ಯಗಳನ್ನು ನಾಶಪಡಿಸುವುದರೊಂದಿಗೆ ಒಂದೇ ರೀತಿಯ; ಒಂದು ಮಾದರಿಯ ಪ್ರತೀಕಗಳ ಜೊತೆಗೆ ಮಾತಾಡುತ್ತವೆ. ಅವು ಹೊಸ ದನಿ; ಹೊಸ ಸಂವೇದನೆಗಳನ್ನು ಶುರು ಮಾಡುವುದರೊಂದಿಗೆ ಹೊಸ ರೀತಿಯ ಆಲೋಚನಾಕ್ರಮವನ್ನು ಸೃಷ್ಟಿಸುತ್ತವೆ. ಖಾಸಗಿಯಾದ ಜೀವನಕ್ರಮದ ಮೇಲೆ ಅತ್ಯಂತ ಗಾಢವಾಗಿ ಪರಿಣಾಮ ಬೀರುವ ಈ ಮಾಧ್ಯಮಗಳು ನಮ್ಮನ್ನು ಬೇರೆ ಬೇರೆ ರೀತಿಯಲ್ಲಿ ಹಿಡಿತದಲ್ಲಿರಿಸಿಕೊಳ್ಳುತ್ತವೆ.

ನಗರ ಮತ್ತು ಹಳ್ಳಿಗಳ ನಡುವಣ ವೈರುಧ್ಯಗಳನ್ನು ಈ ರೀತಿಯ ಸಮೂಹ ಮಾಧ್ಯಮಗಳು ಕಡಿಮೆ ಮಾಡುತ್ತವೆ. ದೆಹಲಿಯ ರಾಜಕಾರಣದ ಸ್ವರೂಪವು ಹಳ್ಳಿಯ ಒಳಗಡೆ ಪ್ರವೇಶಿಸುವುದಕ್ಕೆ ಹೆಚ್ಚು ಸಮಯ ಬೇಕಿಲ್ಲ. ಅಷ್ಟೇ ಅಲ್ಲ. ಸಮೂಹ ಮಾಧ್ಯಮಗಳ ಜೊತೆಗೆ ಬರುವ ಬಂಡವಾಳಶಾಹಿ ಜಗತ್ತು ಹಳ್ಳಿಗೆ ಪ್ರವೇಶಿಸುವಾಗ ಅವು ಬೇರೆ ಬೇರೆ ರೀತಿಯ ಪರಿಭಾಷೆಗಳನ್ನು ಹಳ್ಳಿಗೂ ಕಲಿಸಿಕೊಡುತ್ತವೆ. ನಗರದ ಅನುಕರಣೆಯನ್ನು ಹಳ್ಳಿಯೂ ಮಾಡುವುದರಿಂದ ಸ್ಥಳೀಯ-ಸಾಂಸ್ಕೃತಿಕ ಸಮಸ್ಯೆಗಳು ಶುರುವಾಗುತ್ತವೆ. ಇದರಿಂದ ಒಂದು ಸಾಂಸ್ಕೃತಿಕ ಪರಂಪರೆಯು ಒಡೆದು ಚೂರಾಗಿಹೋಗುತ್ತದೆ. ದೂರದರ್ಶನ ಬಂದಾಗ, ಹಳೆಯ ನಾಟಕಗಳು ಮೂಲೆಗುಂಪಾಗುವುದರಲ್ಲಿದ್ದವು ಎನ್ನುವುದು ಗಮನಾರ್ಹ.

ಸುರಕ್ಷಿತ ಮಧ್ಯಮ ವರ್ಗದ ಮೇಲೆ ಗಾಢವಾದ ಪರಿಣಾಮವನ್ನು ಬೀರುವ ಸಮೂಹ ಮಾಧ್ಯಮಗಳು ಮತ್ತೆ ಅನೇಕ ಕೋನಗಳ ಬಗ್ಗೆ ಯೋಚಿಸುವುದಿಲ್ಲವೆಂಬುದಂತೂ ನಿಜ. ಅರೆ-ಬರೆಯಾದ ಕ್ರಾಂತಿಕಾರಕ-ಉದಾರವಾದಿ ಚಿಂತನೆಯ ಕ್ರಮದ ಸಮೂಹ ಮಾಧ್ಯಮಗಳು ತಮ್ಮ ಸಂವಹನದ ಮಾಧ್ಯಮವನ್ನೇ ಬೇಕು ಬೇಕಾದ ರೀತಿಯಲ್ಲಿ ಬಳಸುವ ಸಾಧ್ಯತೆಯಿದೆ. ಕುಶಲ ತಾಂತ್ರಿಕತೆಯೇ ಸಮೂಹ ಮಾಧ್ಯಮದ ಆಕರ್ಷಣೆಯ ಕೇಂದ್ರವಾದರೆ,

ಕೆಲವು ನಂಬಿಕೆಗಳನ್ನು ಹುಟ್ಟುಹಾಕಿ ಜನರನ್ನು ಹಾದಿ ತಪ್ಪಿಸಬಹುದು. ಕೆಲವು ತಿಂಗಳ ಹಿಂದೆ ಪತ್ರಿಕೆಯೊಂದು ಪ್ರಳಯದ ಕುರಿತು ಲೇಖನವನ್ನು ಪ್ರಕಟಿಸಿತು. ಪ್ರಳಯವಾದರೆ ಇನ್ನೇನು ನಮ್ಮ ಕತೆಯು ಮುಗಿಯಿತೆಂದು ಅನೇಕರು ಭಾವಿಸಿದರು. ಕೊನೆಗೂ ಪ್ರಳಯವಾಗಲೇ ಇಲ್ಲ. ವಿವರವಾದ ಜ್ಞಾನರೂಪಗಳನ್ನು ಎದುರಿಗಿಡದ ಪತ್ರಿಕೆಗಳು ತಮ್ಮ ಅನೇಕ ರೀತಿಯ ಸಂಕೀರ್ಣ ನಿಲುವಿನಿಂದ ಕೆಲವು ಮೂಲಭೂತ ಬದಲಾವಣೆಯನ್ನು ಇಷ್ಟಪಡದೆ ಕೇವಲ ರಾಚನಿಕ ಬದಲಾವಣೆಯ ಬಗೆಗೆ ಒತ್ತನ್ನು ಕೊಡುತ್ತವೆ. ಇದರಿಂದ ಸಮೂಹ ಮಾಧ್ಯಮಗಳು ನಮ್ಮನ್ನು ಕೆಲವು ಕಾರಣಗಳಿಗೆ ಮಾತ್ರವೇ ಸ್ಪರ್ಶಿಸುತ್ತವೆ. ಸಾಮಾಜಿಕ ಜವಾಬ್ದಾರಿ ಎನ್ನುವುದನ್ನು ನಾವು ಸಮೂಹ ಮಾಧ್ಯಮಗಳ ಮೇಲೆ ಹೊರಿಸಿಬಿಟ್ಟರೆ ತೊಂದರೆಯಾಗುವುದು ಈ ಕಾರಣಗಳಿಗೆ.

ಸಾಮಾಜಿಕ ಜವಾಬ್ದಾರಿಯೆಂದರೆ ಅದೊಂದು ಸರಳ ಮತ್ತು ಆಕರ್ಷಕ ನುಡಿಗಟ್ಟಲ್ಲ. ಸಾಮಾಜಿಕ ವಲಯದೊಳಗೆ ರೂಪುಗೊಳ್ಳುವ ಅನೇಕ ಸಮಸ್ಯೆಗಳು ಇದರೊಳಗಡೆಗೆ ಸೇರಿಕೊಂಡಿವೆ. ಸಾಮಾಜಿಕ ಸತ್ಯವನ್ನು ಬಿಂಬಿಸುವಾಗ ರಾಜ್ಯಮಟ್ಟದ ಪತ್ರಿಕೆಗಳು ಒಂದು ರೀತಿಯ ಹೇಳಿಕೆಯನ್ನು ಕೊಡುತ್ತವೆ. ವಾಸ್ತವವಾಗಿ ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಬರುವ ಸುದ್ದಿಗಳು 'ರಾಜ್ಯಮಟ್ಟಕ್ಕೆ' ಸಂಬಂಧಿಸಿದಂತೆ ರೂಪುಗೊಂಡರೆ ಸ್ಥಳೀಯ ಪತ್ರಿಕೆಗಳ ಸಮಸ್ಯೆ ಬೇರೆ. ಅವುಗಳ ಸುದ್ದಿಯ ರೂಪಗಳು ಬೇರೆ. ಸ್ಥಳೀಯ ಪತ್ರಿಕೆಗಳು ಕೊಡುವ ಸುದ್ದಿಯು ಯಾವತ್ತೂ ರಾಜ್ಯದ ಸಮಸ್ಯೆಯಲ್ಲ. ಇದರರ್ಥ ಸ್ಥಳೀಯ ಪತ್ರಿಕೆಗಳಿಗೆ ಯಾವ ಮಹತ್ತ್ವವೂ ಇಲ್ಲಾಂತ ಅಲ್ಲ. ಈ ಪತ್ರಿಕೆಗಳು ಕೊಡುವ ಸುದ್ದಿಯ ಮಹತ್ತ್ವಗಳು ಬೇರೆ. ಇದರ ಜೊತೆಗೆ ಈವೊತ್ತಿಗೆ ಸಾಮಾಜಿಕ ಜವಾಬ್ದಾರಿಯೆನ್ನುವುದು, ಅನೇಕ ರೀತಿಯ ಹಕ್ಕು ಮತ್ತು ಕರ್ತವ್ಯಗಳ ಪ್ರಶ್ನೆಯಾಗಿರುವುದರಿಂದ ಒಂದಕ್ಕೊಂದು ಅಂತರ್‌ಸಂಬಂಧವನ್ನು ಪಡೆದುಕೊಳ್ಳುತ್ತವೆ. ಇದನ್ನು ಬಿಡಿಸಿಕೊಳ್ಳುವುದು ಕಷ್ಟ. ಹೀಗಾಗಿಯೇ ಸಾಮಾಜಿಕ ಜವಾಬ್ದಾರಿಯೆನ್ನುವುದಕ್ಕೆ ಒಂದು ಮುಖವಿಲ್ಲ. ಅನೇಕ ಮುಖಗಳಿವೆ.

ಸಂವಹನದ ದೃಷ್ಟಿಯಿಂದ ಅನೇಕ ರೀತಿಯ ಮಾಹಿತಿ ಜಾಲಗಳು ನಮ್ಮ ನಡುವೆ ಹಾಜರಾಗುತ್ತಿರುವ ಸಂದರ್ಭದಲ್ಲಿ ಸಮೂಹ ಮಾಧ್ಯಮಗಳು ಕೂಡಾ ತಮ್ಮ ಚಹರೆಯನ್ನು ಬದಲಾಯಿಸುತ್ತವೆ. ಭೌತಿಕವಾಗಿ ಪರಸ್ಪರ ದೂರ ಇರುವ ಜನರು ಮಾನಸಿಕವಾಗಿ ಹತ್ತಿರವಾಗುತ್ತಿದ್ದಾರೆ. ಹೊಸ ಹೊಸ ಸಮಸ್ಯೆಗಳು ನಮ್ಮ ನಡುವೆ ರೂಪುಗೊಳ್ಳುತ್ತವೆ. ಉದಾರವಾದಿ ಆರ್ಥಿಕ ನೀತಿಯ ಪರಿಣಾಮಗಳು ದೊಡ್ಡದೆಂದೇ ನನಗನ್ನಿಸುತ್ತದೆ. ಇವರ ಸಾಮಾಜಿಕ ಪ್ರಭಾವಗಳ ದೆಸೆಯಿಂದ ಹೊಸದೊಂದು ಚರ್ಚೆಯು ಸಾಧ್ಯ.



**ಡಾ. ಕೇಶವ ಶರ್ಮ ಕೆ.** :
ಉಪನ್ಯಾಸಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ,
ಜ್ಞಾನಸಹ್ಯಾದ್ರಿ, ಶಂಕರಘಟ್ಟ - ೫೭೭ ೪೫೧ ಜಿ. ಶಿವಮೊಗ್ಗ

# ಚಾಳೀ ಠೂ! ಪಾಲಾ ಫೂ!

ಬಿ. ಟಿ. ದೇಸಾಯಿ

ಮಕ್ಕಳ ನಾಟಕ

**ಪಾತ್ರಗಳು :**

**ರಾಧಾ :** ೧೦ ವರ್ಷದ ಹುಡುಗಿ.

**ಗೋಪಿ :** ಇವನೂ ಅವಳ ಸರಿ ವಯಸ್ಸಿನವನೇ.
ಒಂದೆರಡು ವರ್ಷ ಕಿರಿಯವನಾದರೂ ನಡೆಯುತ್ತದೆ.

## ದೃಶ್ಯ : ಒಂದು

ತೆರೆ ಎದ್ದಾಗ ರಂಗದ ಹಿಂಬದಿಗೆ ಎರಡು ಮನೆಯ ಎರಡು ಬಾಗಿಲುಗಳಿವೆ. ಎಡಗಡೆಯ ಬಾಗಿಲ ಮೇಲೆ 'ಇದು ರಾಧಾನ ಮನೆ' ಎಂದೂ, ಬಲಗಡೆಯ ಬಾಗಿಲ ಮೇಲೆ 'ಇದು ಗೋಪಿಯ ಮನೆ' ಎಂದೂ ಬರೆದಿದೆ. ತೆರೆ ಎದ್ದ ಒಂದು ನಿಮಿಷದ ನಂತರ ರಾಧಾ ತನ್ನ ಮನೆಯಿಂದ ಹೊರಗೆ ಬರುತ್ತಾಳೆ. ಬಂದು ಗೋಪಿಯ ಮನೆಯ ಬಾಗಿಲಿಗೆ ಹೋಗಿ ಕಳ್ಳವನಿಯಿಂದ 'ಗೋಪೀ!' ಎಂದು ಕರೆಯುತ್ತಾಳೆ. ಗೋಪಿಯೂ ಕಳ್ಳ ಹೆಜ್ಜೆಯನ್ನಿಡುತ್ತ ಹೊರಗೆ ಬಂದು, ತಿರುಗಿ ಒಳಗಡೆ ನೋಡಿ, 'ಶ್ ಶ್!' ಎಂದು ರಾಧಾಗೆ ಸನ್ನೆ ಮಾಡಿ ಅವಳನ್ನು ರಂಗದ ಮುಂದಕ್ಕೆ ಕರೆತರುತ್ತಾನೆ. ಇಬ್ಬರೂ ತಮ್ಮ ತಮ್ಮ ಮನೆಯಿಂದ ದೂರ ರಂಗದ ಮುಂದೆ ಇದ್ದಾರೆ.

**ರಾಧಾ :** ಗೋಪೀ, ಆಟಕ್ಕ ಹೋಗೋಣೇನು?

**ಗೋಪಿ :** ಎಲ್ಲಿಗೆ?

**ರಾಧಾ :** ಇಲ್ಲೇ ಆಡೋಣ ಬಾ.

**ಗೋಪಿ :** ಬ್ಯಾಡ. ನಮ್ಮವ್ವ ನೋಡಿದರ ಬೈತಾಳ. ದೂರ ಹೋಗೋಣ ನಡಿ.

**ರಾಧಾ :** ನಡಿ ಹಂಗಾದರ, ಅಲ್ಲೆ ಪಾರ್ಕಿಗೆ ಹೋಗೋಣ.

ಇಬ್ಬರೂ ಕೈ ಕೈ ಹಿಡಿದು ದೂರ ನಡೆದಂತೆ ನಟಿಸುತ್ತಾರೆ.

**ರಾಧಾ :** ಏನು ಆಟಾ ಆಡೋಣ?

**ಗೋಪಿ :** ನಮ್ಮವ್ವಂದು ಸಾಕಾಗಿ ಹೋಗೇದ ನನಗ. ಹೊರಗ ಹೋಗತೇನೀ ಅಂದ್ರ ಸಾಕು, ಎಲ್ಲೆ ನಿನ್ನ ಸಂಗತೀ ಆಟಕ್ಕ ಹೋಗತೇನೋ ಅಂತ ಹೆದರಿಕಿ. 'ಆ ಮುಶ್ಯಾನ ಮರೀ ಸಂಗತಿ' ಆಡಬ್ಯಾಡ!' ಅಂತಾಳ.

**ರಾಧಾ :** ಮತ್ತ ನಮ್ಮವ್ವನೂ ಹಂಗ ಏಳು. ನೀ ಅಂದ್ರ ಹೆಗ್ಗಣದ ಕಂದ ಅಂತ!

**ಗೋಪಿ :** ನೀ ಏನಂತ ಗೊತ್ತದ ಏನು? ನೀ ಅಂದ್ರ ಸುಂಬಳದ ಗೊಣ್ಣೆ ಅಂತ. ಲವುಳ ಸರಾ ಅಂತ!

**ರಾಧಾ :** ಮತ್ತ ನೀ? ಮುಂಟಬೆಕ್ಕಿನ ಮರಿ ಅಂತ. ಒಣಗಿದ ಮೀನ ಅಂತ!

**ಗೋಪಿ :** ನೀ ಡಬಗಳ್ಳೀ ಮುಳ್ಳು!

**ರಾಧಾ :** ನೀ ಒಣಗಿದ ಕುಳ್ಳು!

**ಗೋಪಿ :** ಸುಂಬಳದ ಲೊಟ್ಟಿ!

ರಾಧಾ : ಶೇಂಗಾದ ಸೊಟ್ಟಿ!

ಗೋಪಿ : ಮುಂಗಲೀ ಮೋತಿ!

ರಾಧಾ : ಉಪಗಾರಗೇಡಿ ಕೋತಿ!

ಗೋಪಿ : ಜಾಂಬುವಂತನ ಮಗಳು!

ರಾಧಾ : ಹಿಡಂಬೀ ಮಗಾ!

ಇಬ್ಬರೂ ಚಪ್ಪಾಳೆ ತಟ್ಟಿ ನಗುತ್ತಾರೆ.

ರಾಧಾ : ಅದಕ್ಕ ನಾವಿಬ್ರೂ ಕೂಡಿ ಆಟಾ ಆಡಬಾರದೂ ಅಂತಾರ.

ಗೋಪಿ : ಆದರ ನಿನ್ನ ಸಂಗತೀ ಆಡಲಿಕ್ಕೆ ನನಗ ಭಾಳ ಸೇರತದ.

ರಾಧಾ : ನನಗೂ ಅಷ್ಟ. (ಸ್ವಲ್ಪ ತಡೆದು) ಹಂಗಾದರ ಏನು ಆಟ ಆಡೋಣ?

ಗೋಪಿ : (ತಲೆ ತುರಿಸಿಕೊಳ್ಳುತ್ತ ವಿಚಾರ ಮಾಡಿ) ಹ್ಞಾ! ನನಗೊಂದು ಪ್ಲ್ಯಾನ್ ಹೊಳೀತು. ಹಿಂಗ ಆಡೋಣು.

ರಾಧಾ : ಮತ್ತ ಆಡಲಿಕ್ಕೆ ಒಪ್ಪಿದರ ನನಗೇನು ಕೊಡತೀ? ನಿನ್ನ ಕಿಸೇದಾಗ ಯಾವಾಗಿದ್ರೂ ಇರತಾವಲ್ಲ ಚಾಕಲೇಟು? ನನಗೊಂದು ಕೊಟ್ಟರ ಆಡಲಿಕ್ಕೆ ಬರತೇನಿ.

ಗೋಪಿ : ಒಂದS ಅದ ಅಲ್ಲ? ಹೆಂಗ ಕೊಡಲಿ?

ರಾಧಾ : ನನ್ನ ಕೈಯಾಗ ಕೊಡು. ನಾ ಗುಬ್ಬೀ ಎಂಜಲಾ ಮಾಡಿ ಕೊಡತೇನಿ.

ಗೋಪಿ : (ಕಿಸೆಯಿಂದ ತೆಗೆದು ಕೊಡುತ್ತ) ತೊಗೋ!

ರಾಧಾ ಚಾಕಲೇಟನ್ನು ತನ್ನ ಪರಕಾರದಲ್ಲಿ ಮುಚ್ಚಿ ಕಡಿದು ಎರಡು ಭಾಗ ಮಾಡಿ, ಒಂದನ್ನು ಗೋಪಿಗೆ ಕೊಡುತ್ತಾಳೆ.

ರಾಧಾ : ತೊಗೋ ನಿನ್ನ ಪಾಲು.

ಗೋಪಿ : ಏ! ಒಂದು ದೊಡ್ಡದು, ಒಂದು ಸಣ್ಣದು ಹಿಂಗ ಯಾಕ ಮಾಡಿದಿ? ಸಮಾ ಎರಡು ಭಾಗ ಮಾಡಲಿಕ್ಕೆ ಬರತಿದ್ದಿಲ್ಲ?

ರಾಧಾ ಗಬಕ್ಕನೆ ತನ್ನ ಪಾಲಿನ ತುಂಡನ್ನು ಬಾಯಲ್ಲಿ ಹಾಕಿಕೊಳ್ಳುತ್ತಾಳೆ.

ಗೋಪಿ : (ಸಿಡಿಮಿಡಿಯಿಂದ) ಹೋಗು! ನಾ ಒಲ್ಲೆ ನಿನ್ನ ಸಂಗತಿ ಆಟಾ ಆಡಲಿಕ್ಕೆ. ನೀ ಯಾವಾಗಿದ್ರೂ ಹಿಂಗ, ಬರೇ ಅನ್ನೆ!

ರಾಧಾ : (ಅಣಕಿಸುತ್ತ) ಅಯ್ಯ, ಅಳುಬುರುಕ ಹೆಣ್ಣ್ಯಾ!

ಗೋಪಿ : ನೀ ಹೆಗ್ಗಣದ ಠೊಣ್ಯಾ! ಒಲ್ಲೆ ಹೋಗು ನಿನ್ನ ಸಂಗತೀ ಆಡಲಿಕ್ಕೆ. ನಾ ಮನೀಗೆ ಹೋಗತೇನಿ.

ರಾಧಾ : ಹೋಗು. ಪಾಪ! ಅವ್ವನ ಹೆದರಿಕಿ ಅಲ್ಲ? ಮುಂಗಡೀ ಕೂಸು ನೀನು! ಲೋ ಲೋ ಲೋ ಆಯೀ! ಏ, ಬಾ ನಾಯಿ! ಕುರೇ, ಕುರೇ!

ಗೋಪಿ : ನೋಡೂ, ನೋಡೂ! ನನಗ ಸಿಟ್ಟು ಬಂತಂದ್ರ...

ರಾಧಾ : ಏನು ಮಾಡತೀ? ಅತ್ತು ಬಿಡತೀ ಹೌದಲ್ಲೋ! (ಅಣಕಿಸುವ ದನಿಯಲ್ಲಿ ಹಾಡುತ್ತ)

**ಅತ್ತಾರ ಅಳಲೆವ್ವ ಈ ಕೂಸು ನನಗಿರಲೀ**

**ಕೆಟ್ಟಾರ ಕೆಡಲೀ ಮನಿಗೆಲಸಾ;**

ಕೆಟ್ಟ್ಯಾರ ಕೆಡಲೀ ಮನಿಗೆಲಸ, ಇವನಂಥಾ
ಮಕ್ಕಳಿರಲೆವ್ವ ಮನಿ ತುಂಬ!
ಛೀ ಕಳ್ಳಾ! ಅಳತಾರೇನು? ಜಾಣ ಮರೀ ಅಲ್ಲ! ಹೋತು ಬಿಡು ಬಾಳಾ!

ಗೋಪಿ : ಏ ರಾಧೀ, ಮಾಡತೇನಿ ತಡೀ ನಿನಗ. ನಮ್ಮವ್ವಗ ಹೇಳಿ ನಿನಗ ಮಾಡಿಸದಿದ್ದರ ನನ್ನ ಹೆಸರು...

ರಾಧಾ : ಅಳುಬುರುಕ ಹೆಣ್ಣ್ಯಾ ಗೋಪೀನ ಅಲ್ಲ! ಹೌದಲ್ಲೋ? ಥೊಡ್ಡ ಗಂಡಸು ಹೇಳೋ ಹಂಗಿಲ್ಲ! ಅಪ್ಪನ ಮುಸುಕಿನ್ಯಾಗ ಅಡಗಿಕೋತೀಯಾ? ಆ ನಿಮ್ಮ ಅವ್ವ ಒಂದು! ಆಕೀ ಬಾಯಿ ಅಂದ್ರ ಝೂಂಗಟಿ ಆಗೇದ.

ಗೋಪಿ : (ತನ್ನ ಅಭಿಮಾನಕ್ಕೆ ಧಕ್ಕೆ ಬಂದದ್ದರಿಂದ ಒಮ್ಮೆಲೆ ಸುಮ್ಮನಾಗಿ, ಕಣ್ಣೊರೆಸಿಕೊಂಡು) ಮತ್ತ ನಿಮ್ಮವ್ವನ ಬಾಯಿ ಗಿರಣೀ ಭೋಂಗಾ ಆಗೇದ.

ರಾಧಾ : ನಿಮ್ಮವ್ವನ ತಲೀ ಅಂದ್ರ ಹುಲ್ಲಿನ ಬಣವಿ!

ಗೋಪಿ : ನಿಮ್ಮವ್ವನ ತುರುಬು ಗೋಟಡಕೀ ಬೆಟ್ಟ!

ರಾಧಾ : ನಿಮ್ಮಪ್ಪನ ಮಾರೀ ಮ್ಯಾಲ ಜೊಂಡಿಗ್ಯಾ ಆಡತಾವ!

ಗೋಪಿ : ನಿಮ್ಮಪ್ಪನ ಮಾರೀ ಮ್ಯಾಲ ಅಮ್ಮಗೋಳ ಕಳೀ ಸುರೀತದ!

ರಾಧಾ : ನಿಮ್ಮ ಮನೀ ಅಂದ್ರ ಕಾಗೀ ಗೂಗೀ ಸಂಸಾರಾ!

ಗೋಪಿ : ಮತ್ತ ನಿಮ್ಮ ಮನೀ ಅಂದ್ರ ಹೆಗ್ಗಣದ ಹೋರಿನ್ಯಾಗ ಚುಚಂದ್ರೀ ಕಾರಭಾರಾ!
ಇಬ್ಬರೂ ಆಶ್ಚರ್ಯದಿಂದ ಪರಸ್ಪರರನ್ನು ದಿಟ್ಟಿಸಿ ನೋಡುತ್ತಾರೆ.

ರಾಧಾ : ('ಭಪ್ಪರೇ!' ಎನ್ನುವಂತೆ ಬಾಯಿಯ ಮೇಲೆ ಬೆರಳಿಟ್ಟುಕೊಂಡು) ಅಲ್ಲೋ, ಇಷ್ಟೆಲ್ಲಾ ಮಾತು ನಿನಗ ಯಾರು ಹೇಳಿಕೊಟ್ಟರು!

ಗೋಪಿ : ನಮ್ಮಪ್ಪ - ನಮ್ಮವ್ವ, ನಿಮ್ಮಪ್ಪ - ನಿಮ್ಮವ್ವಗ ಹಿಂಗ ಬೈತಾರೇಳು. ಮತ್ತ ನೀ ಹೆಂಗ ಈ ಮಾತು ಕಲಿತಿ?

ರಾಧಾ : ನಾನೂ ನಿನ್ನ ಹಂಗ ಕಲಿತೆ. ಇಕಾ ಗೋಪೀ, ನೀ ಆಟಾ ಆಡೋಣ ಅಂದೆಲ್ಲ? ನನ್ನದೊಂದು ಪ್ಲ್ಯಾನು ಅದ. ಹಂಗ ಮಾಡೋಣ. ಬಾ, ಮನೀಗೆ ಹೋಗೋಣ. ಹಾದ್ಯಾಗ ಎಲ್ಲ ಹೇಳತೇನಂತ.

ಗೋಪಿ : ಮತ್ತೇನು? ಝಗಳಾಡೋದು, ಹೌದಲ್ಲೋ?

ರಾಧಾ : ಅಲ್ಲ; ಝಗಳಾ ಆಡೋದು. ಮತ್ತ ನನಗ ಚಾಕಲೇಟು ಕೊಡತೀ ಹೌದಲ್ಲೋ?

ಗೋಪಿ : (ಕಿಸೆಯಿಂದ ಚಾಕಲೇಟು ಒಂದನ್ನು ತೆಗೆದು) ಇದು ಒಂದ ಅದ ನೋಡು.

ರಾಧಾ : ಹಿಂಗ ಒಂದೂ ಅಂತ ಇನ್ನೂ ಎಷ್ಟು ಅವನೋ? ಎಲ್ಲೆ, ತೋರಿಸು?
ಗೋಪಿ ತನ್ನ ಅಂಗೈಯಲ್ಲಿದ್ದ ಚಾಕಲೇಟು ತೋರಿಸುತ್ತಾನೆ. ರಾಧಾ ಅದನ್ನು ಹಾರಿ ಹೊಡೆದು ಅದು ದೂರ ಬಿದ್ದ ಕೂಡಲೆ ಅದನ್ನು ಲಗುಬಗೆಯಿಂದ ಬಾಯಲ್ಲಿ ಹಾಕಿಕೊಳ್ಳುತ್ತಾಳೆ.

ಗೋಪಿ : (ಸಿಟ್ಟಿನಿಂದ) ರಾದಿ, ಗೂದಿ? ನಾ ಬರೂದಿಲ್ಲ ನಿನ್ನ ಸಂಗತೀ ಆಡಲಿಕ್ಕೆ, ಹೋಗು!

ರಾಧಾ : ಒಳ್ಳೆ ಹೌದಲ್ಲೋ? ಬ್ಯಾಡ ಬಿಡು. ಹೋಗಿ ಅಪ್ಪನ ಮಗ್ಗಲದಾಗ ಮಲಕೋ ಹೋಗು, ಬಾಳಾ!

ಗೋಪಿ : (ಅಳುತ್ತ) ರಾದಿ ಗೂದಿ...!

ರಾಧಾ ಅವನನ್ನು ರಮಿಸಲೆಂದು ಬಂದು ಕಳ್ಳತನದಿಂದ ಅವನ ಕಿಸೆಯಿಂದ ಇನ್ನೊಂದು ಚಾಕಲೇಟು ತೆಗೆದು ಅದನ್ನೇ ಅವನ ಕೈಯಲ್ಲಿಡುತ್ತಾಳೆ.

ರಾಧಾ : ಅಳಬ್ಯಾಡ ಬಿಡು. ತಪ್ಪಾತು ನನ್ನದು. ಇಕಾ ತಗೋ ನಿನ್ನ ಚಾಕಲೇಟು.

ಗೋಪಿ : (ಕಣ್ಣೊರಸಿಕೊಳ್ಳುತ್ತ) ಎಲ್ಲೆ ಸಿಕ್ಕಿತು ಇದು ನಿನಗ?

ರಾಧಾ : ನಿನ್ನ ಕಿಸೇದಾಗ ಇತ್ತು. (ಓಡಿ ಹೋಗುತ್ತಾಳೆ.)

ಗೋಪಿ : (ಅವಳನ್ನು ಬೆಂಬತ್ತಿ) ಏ, ನಾನೂ ಬಂದೆ ತಡೀ. ಆ ನಿನ್ನ ಆಟದ ಪ್ಲ್ಯಾನು ಹೇಳೀಯಂತ.

ರಾಧಾ : (ತಿರುಗಿ ಬರುತ್ತ) ಹಿಂಗ ಬಾರೋ ಹಾದಿಗೇ! ಬಾ, ಹೇಳತೇನಿ.

ರಾಧಾ ಗೋಪಿಯ ಕಿವಿಯಲ್ಲಿ ಏನೋ ಪಿಸುಗುಡುತ್ತಾಳೆ.

ಇಬ್ಬರೂ ಕೈಕೈ ಹಿಡಿದುಕೊಂಡು ಹೋಗುತ್ತಾರೆ.

### ದೃಶ್ಯ : ಎರಡು

ಗೋಪಿಯು ಮನೆಯ ಹೊರಗೆ ಬಂದು 'ರಾಧಾ' ಎಂದು ಕಳ್ಳತನದಿಂದ ಕರೆಯುತ್ತಾನೆ. ಅವನ ಕೈಯಲ್ಲಿ ಅರಿವೆಯ ಒಂದು ಗಂಟು ಇದೆ. ರಾಧಾ ತನ್ನ ಮನೆಯಿಂದ ಬರುತ್ತಾಳೆ. ಅವಳ ಕೈಯಲ್ಲಿಯೂ ಒಂದು ಗಂಟು ಇದೆ. ಇಬ್ಬರೂ ತಮ್ಮ ತಮ್ಮ ಗಂಟುಗಳನ್ನು ಅದಲು ಬದಲು ಮಾಡಿಕೊಂಡು ಮತ್ತೆ ತಿರುಗಿ ತಮ್ಮ ತಮ್ಮ ಮನೆಯ ಒಳಗ ಹೋಗುವಾಗ

ರಾಧಾ : ಲಗೂ ಬಾ ಗೋಪೀ. ನಾ ಈಗ ರೆಡಿ ಆಗಿ ಬರತೇನಿ.

ಗೋಪಿ : ಈಗ ಬಂದೆ.

ಇಬ್ಬರೂ ಒಳಗೆ ಹೋಗುತ್ತಾರೆ. ಎರಡು ನಿಮಿಷ ರಂಗ ಖಾಲಿ ಇದೆ. ನಂತರ, ಮೊದಲು ಗೋಪಿ ಬರುತ್ತಾನೆ. ಅವನು ಸೀರೆ ಉಟ್ಟಿದ್ದಾನೆ, ದೊಡ್ಡ ಹೆಣ್ಣು ಮಕ್ಕಳಂತೆ. ಬಂದು ಆಢ್ಯತೆಯಿಂದ ತನ್ನ ಮನೆಯ ಮುಂದೆ ಅಡ್ಡಾಡುತ್ತಿರುತ್ತಾನೆ. ಅರೆಕ್ಷಣದಲ್ಲಿ ರಾಧೆಯೂ ಬರುತ್ತಾಳೆ. ಅವಳೂ ಸೀರೆ ಉಟ್ಟಿದ್ದಾಳೆ ದೊಡ್ಡವರಂತೆ. ಬಂದಾಕೆಯೇ ಗೋಪಿಯನ್ನು ಮುರುಗುಟ್ಟಿ ನೋಡಿ ಧಪ್, ಧಪ್! ಕಾಲು ಹಾಕುತ್ತ ಅತ್ತಿತ್ತ ತಿರುಗಾಡುತ್ತಾಳೆ.

ರಾಧಾ : ಏನ್ರೀ, ಗಂಗೂಬಾಯೀ!

ಗೋಪಿ : ಯಾಕ್ರೀ, ರಂಗೂಬಾಯೀ!

ರಾಧಾ : ನಮ್ಮ ಅಂಗಳಾ ಅಂದ್ರೇನು ತಿಪ್ಪೀಗುಂಡೀ ಮಾಡೀರೇನು? ನಿಮ್ಮ ಮನೀ ಕಸ ನಮ್ಮ ಅಂಗಳದಾಗ ಯಾಕ ಒಗೀತೀರಿ?

ಗೋಪಿ : ಅಯ್ಯ! ನನಗೇನು ಗೊತ್ತರೇ ಇದು ನಿಮ್ಮ ಅಂಗಳ ಅಂತ? ಇದು ಖರೇನ ತಿಪ್ಪೀಗುಂಡಿ ಆಗೇದಲ್ಲ!

ರಾಧಾ : ಯಾಕ? ನೆರಿಯವರು ಅಂದ್ರ ಇಷ್ಟು ಸವಲತ್ತೇನು ನಿಮಗ? ಮೊದಲ ನಿಮ್ಮದು ಸ್ವಚ್ಛ ಇಟಗೊಂಡು ಆಮ್ಯಾಲ ಮಂದೀದು ನೋಡಿ ಮಾತಾಡಬೇಕು.

ಗೋಪಿ : ಹಿಂಗೇನ್ರಿ. ಮತ್ತ ನಿಮ್ಮ ಮನ್ಯಾಗ ಕತ್ತಿ ಸತ್ತು ಬಿದ್ದಿರಲಿಕ್ಕೆ, ನಮ್ಮ ಮನೀ ನೊಣಾ ಹೊಡೀಲಿಕ್ಕೆ ಯಾಕ ಬಂದೀರಿ?

ರಾಧಾ : ನಮ್ಮ ಮನೀ ಕತ್ತಿ ನಮ್ಮ ಮನ್ಯಾಗ ಬಿದ್ದಿರತದ. ನಾವೇನು ನಿಮ್ಹಂಗ ಮಂದೀ ಮನಿ ಹೊಲಸು ಮಾಡೋದಿಲ್ಲ.

ಗೋಪಿ : ಆದ್ರ ನಾತಾ ಮಾಡತೀರೆಲ್ಲ? ನಿಮ್ಮ ಮನೀ ಹಿತ್ತಲಾ ಅಂದ್ರ ಸಾರ್ವಜನಿಕ ಪಾಯಖಾನೀ ಮಾಡಿಬಿಟ್ಟೀರೆಲ್ಲ?

ರಾಧಾ : ನಿನ್ನ ಬಾಯಿ ನೋಡಿಕೋ ಮೊದಲ!

ಗೋಪಿ : ಯಾಕ, ರಂಗೂಬಾಯೀ! ನೀನೂ ತಾನೂ ಅಂತೀ? ಇವತ್ತೆಲ್ಲೂ ಝಗಳ ಸಿಕ್ಕಿಲ್ಲೇನು? ಹಾಲಿನವನ ಸಂಗ್ತೀ ಮುಗಿಸಿದಿ. ಇನ್ನೂ ಗಂಡನ ಪಾಳೇ ಬಂದಿಲ್ಲೇನು?

ರಾಧಾ : ನಮ್ಮ ಮನೀ ಹಿಂದು ಹೊಲಗೇರಿ ಮಾಡಕೋತೇನಿ. ನೀ ಯಾರು ಅದನ್ನ ಕೇಳಲಿಕ್ಕೆ?

ಗೋಪಿ : ಕೇಳಿಸೋ ಹಂಗ ಮಾಡತೀ, ಅದಕ್ಕ ಕೇಳಿಸ್ತದ. ಆ ನಿನ್ನ ಬಾಯಿಗೆ ಮೊದಲ ಒಂದು ಬೂಚು ಹಾಕಿಕೋ!

ರಾಧಾ : ನನ್ನ ಬಾಯಿಗೆ ಬೂಚು ಹಾಕಲಿಕ್ಕೆ ನೀ ಯಾರು? ನಿನ್ನದು ನೋಡಿಕೋ ಹೋಗ ಗಯ್ಯಾಳಿ ಗಂಗೀ!

ಗೋಪಿ : ಹೌದು ಹೋಗ, ರೌಡೀ ರಂಗೀ!

ರಾಧಾ : ಯಾಕ ನನಗ ರಂಗೀ ಗಿಂಗೀ ಅಂತೀ! ನನಗ ಹೆಸರು ಇಟ್ಟು ಹೇಸಿ ಗುಗ್ಗರೀ ತಿಂದೀಯಾ?

ಗೋಪಿ : ನೀ ತಿನ್ನೋದೂ ಅದ ಮತ್ತ. ನಿನ್ನ ಬಾಯಾಗ ಯಾವಾಗಿದ್ದರೂ ಅದ ಇರತದಲ್ಲ?

ರಾಧಾ : ಬರಲಿ, ಬರಲಿ! ಇವ್ರು ಮನೀಗೆ ಬರಲಿ! ಮಾಡಿಸ್ತೇನಿ! ಮನೀ ಮಾಲೀಕಗ ಹೇಳಿ ನಿಮ್ಮನ್ನ ಇಲ್ಲಿಂದ ಒದ್ದು ಓಡಿಸದಿದ್ದರ ನನ್ನ ಹೆಸರು...

ಗೋಪಿ : ಗಿರಣೀ ಭೋಂಗಾನ ಅಲ್ಲಾ!

ರಾಧಾ : (ಸಿಟ್ಟಿನ ರೌಸಿನಲ್ಲಿ ಅರ್ಧಂಬರ್ಧ ಅಳುತ್ತ) ಹೌದ! ನಾ ಗಿರಣೀ ಭೋಂಗಾ ಆದ್ರ ನೀ ರಣಹಲಗಿ!

ಗೋಪಿ : ಹೌದು ಮತ್ತ! ನಿಮ್ಮನ್ನ ಸುಡುಗಾಡುಗಟ್ಟಿಗೆ ಸಾಗಿಸಬೇಕಾದಾಗ ಬೇಕಲ್ಲ ಮತ್ತ?

ರಾಧೆಯು ಸಿಟ್ಟಿನಿಂದ ಲಟಿಗೆ ಮುರಿಯುತ್ತ. ಅಸ್ಪಷ್ಟವಾಗಿ ಒದರುತ್ತ. 'ಮಾಡಿಸ್ತೇನಿ. ಮಾಡಿಸ್ತೇನಿ!' ಎಂದು ಒಳಗೆ ಹೋಗುತ್ತಾಳೆ. ಗೋಪಿ ಅವಳು ಹೋಗುವುದನ್ನು ಒಂದು ಕ್ಷಣ ದುರುಗುಟ್ಟಿ ನೋಡಿ, ಗಡಿಬಿಡಿಯಿಂದ ಒಳಗ ಓಡುತ್ತಾನೆ. ಅಷ್ಟೇ ಗಡಿಬಿಡಿಯಿಂದ ಹೊರಗೆ ಬರುತ್ತಾನೆ. ಕೈಯಲ್ಲಿ ಒಂದು ಕಸದ ಬುಟ್ಟಿ ಇದೆ. ರಾಧೆಯ ಮನೆಯತ್ತ ನೋಡಿ, ಅವಸರವಸರವಾಗಿ ಕಸವನ್ನು ರಾಧೆಯ ಮನೆಯ ಅಂಗಳದಲ್ಲಿ ಸುರುವಿ ಒಳಗೆ ಓಡುತ್ತಾನೆ.

## ದೃಶ್ಯ : ಮೂರು

ಮತ್ತೆ ರಂಗವು ಎರಡು ಕ್ಷಣ ಸ್ತಬ್ಧ. ಈಗ ರಾಧಾ ಬರುತ್ತಾಳೆ. ಗಂಡಸರಂತೆ ಪಾಯಿಜಾಮ. ನೆಹರೂ ಶರ್ಟ್ ಹಾಕಿದ್ದಾಳೆ. ಬಂದು ಬೆನ್ನ ಹಿಂದೆ ಕೈಕಟ್ಟಿಕೊಂಡು ಶತಪಥ ಹಾಕುತ್ತಾಳೆ.

ಆಗಾಗ ಗೋಪಿಯ ಮನೆಯ ಕಡೆಗೆ ನೋಡುತ್ತಾಳೆ. ಗೋಪಿಯೂ ಈಗ ಬರುತ್ತಾನೆ. ಲುಂಗೀ ಸುತ್ತಿಕೊಂಡು ಶರ್ಟು ಹಾಕಿದ್ದಾನೆ. ಕೈಯಲ್ಲಿ ಕುರ್ಚಿಗೆ ಹಿಡಿದುಕೊಂಡು ತನ್ನ ಅಂಗಳದ ಒಂದು ತುದಿಗೆ ಕುಳಿತುಕೊಂಡು— ಅದರೆ ಪ್ರೇಕ್ಷಕರಿಗೆ ಎದುರಾಗಿ —ತನ್ನ ತೋಟದ ಕಳೆ ಕೆತ್ತುವವನಂತೆ ನಟಿಸುತ್ತಾನೆ.

ರಾಧಾ : (ಪ್ರೇಕ್ಷಕರ ಮುಂದ ಬಂದು— ಆದರೆ. ಗೋಪಿಗೆ ಬೆನ್ನು ಮಾಡಿ) ಧನಗರ್ ಸೂಳೀಮಗಾ! ತ್ವಾಟಾ ಮಾಡತಾನಂತ, ತ್ವಾಟಾ! ಹಜಾಮತಿ ಮಾಡೂ ಅನ್ನಬೇಕು ಇವ್ನಗ. ಮೊನ್ನಿನಿಂದ ನೋಡಲಿಕ್ಕೆ ಹತ್ತೇನಿ. ಕೈಯಾಗ ಕುರ್ಚಿಗೀ ಹಿಡಕೊಂಡು ಮಣ್ಣು ಕೆತ್ತಿದ್ದ ಕೆತ್ತಿದ್ದು! ಕೆತ್ತಲಿ, ಕೆತ್ತಲಿ! ಮಾಡತೇನಿ. ಅಪ್ಪಾ ಗಿಡಾಪಡಾ ಏನರ ಬೆಳೆಸಿದಾ ಅಂದ್ರ ಅವಕ್ಕ ಒಂದು ಹನೀ ನೀರು ಸಿಗದ ಹಂಗ ಮಾಡತೇನಿ. ಹೆಂಗಿದ್ರೂ ನಮ್ಮ ಪಾಯ್ಪಿನ್ಯಾಗಿಂದ ನೀರು ಹೋಗಬೇಕು ಇವ್ನನ ಮನಿಗೆ. (ಗೋಪಿಯ ಕಡೆಗೆ ನೋಡಿ) ಕೆತ್ತು ಮಗನ, ಕೆತ್ತು!

ಮತ್ತೆ ಮೊದಲಿನಂತೆ ಶತಪಥ.

ಗೋಪಿ : (ಪ್ರೇಕ್ಷಕರಿಗೆದುರಾಗಿ ಕುಳಿತು. ಅವರನ್ನುದ್ದೇಶಿಸಿ) ಹೊಟ್ಟೀಕಿಚ್ಚು ಈ ನನ್ನ ಮಗಗ ನಾ ಛೆಂದ ತ್ವಾಟಾ ಮಾಡತೇನಲ್ಲಾ ಅಂತ! ನಮಗ ನೀರು ಹರಿಗೊಡೋದಿಲ್ಲಂತ. ಅದ್ಹೆಂಗ ಕೊಡೋದಿಲ್ಲೋ ನೋಡೇಬಿಡತೇನಿ. ಅವನ ಮನ್ಯಾಗಿನ ಪಾಯ್ಪ್ ಒಡದು ಬಿಡತೇನಿ. ಹೊಟ್ಟೀಕಿಚ್ಚಿನಿಂದ ಉರೀತಾನ ಧಗಧಗಾ! ಉರಿ, ಉರಿ! ಹಂಗ ಉರದು ಸುಟ್ಟು ಬೂದಿಯಾಗು ಮಗನ!

ರಾಧಾ : ಇವನ ಮ್ಯಾಲ ಹೊಟ್ಟೀಕಿಚ್ಚು ಪಡಲಿಕ್ಕೆ ಏನು ವೈಭವ ಮೆರೀತಾನ ಇವ್ನಾ? ನಮ್ಮನ್ನ ನೋಡಿ ಇವ್ನಗ ಹೊಟ್ಟೀಕಿಚ್ಚು. ನಮ್ಮ ಮನೀ ಫ್ರಿಜ್ಜು, ಸೋಫಾ, ಟೀವೀ ನೋಡಿ ಹೊಟ್ಟ್ಯಾಗ ಖಾರಾ ಕಲಿಸಿದ್ಹಂಗ ಆಗೇದ ಈ ನನ್ನ ಮಗಗ! ಮೊನ್ನೆ ತನ್ನ ಮಂಗ್ಯಾನ ಮರೀನ ಮಾಳಿಗೀ ಮ್ಯಾಲ ಹತ್ತಿಸಿ ನಮ್ಮ ಟೀವೀ ತಂತೀನ ಕಿತ್ತಿ ಹಾಕಿಸಿದಾ! ಕೇಳಿದ್ರ 'ಗೊತ್ತಿಲ್ಲ' ಅಂತ ನಾಟಕಾ ಮಾಡತಾನ.

ಗೋಪಿ : ಮಂದೀ ರೊಕ್ಕಾ ಹಾಕಿ, ಮಾಲೀಕನ ಬಾಡಿಗೀ ಮುಣಗಿಸಿಕೊಂಡು, ಆಫೀಸಿನ್ಯಾಗ ಲಂಚ ತಿನ್ನತಿದ್ರ ಯಾ ಮಗಗ ಸಾಧ್ಯ ಆಗೋದಿಲ್ಲ ಟೀವೀ, ಫ್ರಿಜ್ಜು, ಸೋಫಾ ತೊಗೊಳ್ಳಿಕ್ಕೆ? ನಾನೂ ತೊಗೋತಿದ್ದೆ. ಆದರ ನೀತೀ ಅನ್ನೋದೊಂದು ಇರತದಲ್ಲ ಮನುಷ್ಯ ಅನ್ನಿಸಿಗೊಂಡ ಮ್ಯಾಲ?

ರಾಧಾ : ನೀತೀನ ಇವ್ನಗ? ಯಾವ ಬಾಯಿಂದ ಹೇಳತಾನ ಈ ಮಗಾ? ಮೊನ್ನೆ ತನ್ನ ಆಫೀಸಿನ್ಯಾಗ ಯಾರದೋ ರೊಕ್ಕಾ ಅಫರಾ ತಫರಾ ಮಾಡಲಿಕ್ಕೆ ಹೋಗಿ ಸಿಗಬಿದ್ದಿದ್ದನಲ್ಲ? ಇವ್ನಗ ನೀತೀನ?

ಗೋಪಿ : ಹೇಸಿ ನನ್ನ ಮಗಾ! ಮಂದೀ ಕಾರಭಾರ ಬೇಕು ಇವ್ನಗ! ಮತ್ತ ತಾ ಏನು ಸುದ್ದುಳ್ಳವ್ನನ? ಆಫೀಸಿನ್ಯಾಗ ಇವ್ನನ್ನ ಕಂಡ್ರ ಹೇಸಿಗೀ ಕಂಡ್ಹಂಗ ದೂರ ಸರೀತಾರ ಜನಾ. ಓಣ್ಯಾಗ ಹೊಂಟಾ ಅಂದ್ರ ಇವ್ನನ ಸನೇಕ್ಕ ಬರೋವ್ರೂ ಅಂದ್ರ ಹಂದಿ ಒಂದ!

ರಾಧಾ : ಒಣ್ಯಾಗ್ಯಾಕ? ಮಗ್ಗಲ ಮನ್ಯಾಗ ಅಪ ಅಲ್ಲ, ಒಂದಲ್ಲದ್ಹಂಗ ಮೂರು ಹಂದಿ! (ಸ್ವಲ್ಪ ತಡೆದು) ಆಗ್ಲಿ, ಕೇಳೇಬಿಡತೇನಿ ಇವ್ನನ್ನ ಇವತ್ತ. (ತಿರುಗಿ ನಿಂತು. ಗೋಪಿಯನ್ನುದ್ದೇಶಿಸಿ) ಗುಡ್ ಈವ್ನಿಂಗ್ ಹಣಮಂತರಾವ್!

ಗೋಪಿ : (ತಿರುಗಿ ಕುಳಿತು ರಾಧೆಯನ್ನುದ್ದೇಶಿಸಿ) ಗುಡ್ ಈವ್ನಿಂಗ್ ಹಯವದನರಾವ್!

ರಾಧಾ : ನಿಮ್ಮ ಸಂಗ್ತೀ ಸ್ವಲ್ಪ ಮಾತಾಡಬೇಕಾಗೇದ.

ಗೋಪಿ : ಮಾತಾಡ್ರಿ. ನಿಮ್ಮ ಧನಿ ಅಲ್ಲಿಂದನ ಕೇಳಿಸ್ತದ.

ರಾಧಾ : ನೀವು ಇಲ್ಲೆ ಸನೇಕ್ಕ ಬಂದ್ರ ಹೇಳ್ಲಿಕ್ಕೆ ಅನುಕೂಲ ಆಗತದ.

ಗೋಪಿ : ಯಾಕ? ಟೆಲಿಫೋನು ತೊಗೊಳ್ಳೋವ್ರು ಇದ್ದೀರೇನು?

ರಾಧಾ : ಅಂದ್ರ?

ಗೋಪಿ : ಅಲ್ಲ, ಸಣ್ಣ ಧನಿಯಿಂದ ಮಾತಾಡಲಿಕ್ಕೆ ಪ್ರ್ಯಾಕ್ಟೀಸು ಮಾಡಲಿಕ್ಕೆ ಹತ್ತೀರೋ ಹೆಂಗೋ ಅಂತ.

ರಾಧಾ : ಮಾಡ್ರಿ, ಮಾಡ್ರಿ ಚ್ಯಾಷ್ಟೀ! ನಾ ಟೆಲಿಫೋನು ತೊಗೋಬೇಕೂ ಅಂದದ್ದು ಖರೇ. ಆದ್ರ ನಿಮ್ಮ ಸಂಗತೀ ಮಾತಾಡಲಿಕ್ಕೆ ಫೋನು ಎದಕ್ಕ? ನೀವು ಸಹಜ ಇಲ್ಲಿಂದ ಮಾತಾಡಿದರೂ ಸಾಕು ನಿಮ್ಮ ದನಿ ಹತ್ತು ಮೈಲು ದೂರ ಬ್ರಾಡ್‌ಕಾಸ್ಟ್ ಆಗತದ. ಅಂತೂ ನಿಮ್ಮ ಕಂಠತ್ರಾಣ ದೊಡ್ಡದರೆಪಾ!

ಗೋಪಿ : ಏನೋ ದೇವರು ಕೊಟ್ಟ ದೇಣಗಿ, ಒಲ್ಲೇ ಅಂದ್ರ ಬಿಡಲಿಕ್ಕೆ ಬರತದ? (ಈಗ ಎದ್ದು ನಿಂತು ರಾಧೆಯನ್ನುದ್ದೇಶಿಸಿ) ಹ್ಞೂ, ನೀವೇನೋ ಹೇಳಬೇಕೂ ಅಂತಿದ್ರಿ?

ರಾಧಾ : ಏನಿಲ್ಲ. ನಿಮ್ಮ ಮನ್ಯಾಗ ರೇಡಿಯೋ ಸ್ವಲ್ಪ ಸಣ್ಣಗ ಹಚ್ಚಿದ್ರ ನಮಗೂ ನೇಬರ್ಸ್‌ಗೆ ಶಾಂತ ಇರತದ.

ಗೋಪಿ : ಹಿಂಗ? ಹಚ್ಚೂಣ. ನಿಮ್ಮ ಮನ್ಯಾಗ ಟೀವೀ ಬಂದ ತೊಟ್ಟೂ ರೇಡಿಯೋದ ರೂಢಾ ತಪ್ಪಿರಬೇಕಲ್ಲ?

ರಾಧಾ : (ನಗುತ್ತ) ಹೆಹೆಹೆ! ಹೌದು, ಹಂಗ ಅನ್ನರಿ. ಅಂದ್ಹಂಗ ತ್ವಾಟದಾಗ ಏನು ಹಾಕಬೇಕೂ ಅಂತ ಮಾಡೀರಿ?

ಗೋಪಿ : ಏನೋ ಸ್ವಲ್ಪ ಕೋತಂಬ್ರಿ, ಮೆಂಥೇ, ಪುಂಡೀಪಲ್ಯಾ, ಸಾಧ್ಯ ಆದ್ರ ಕ್ಯಾಬೇಜು, ಕಾಲೀ ಫ್ಲಾವರ್ರು, ಬಿನೀಸು ಹಾಕಬೇಕೂ ಅಂತ ಮಾಡೇನಿ. ಆದ್ರ ನೀರಿಂದೊಂದ ತ್ರಾಸ ನೋಡ್ರಿ. ನೀವು ಧೊಡ್ಡ ಮನಸು ಮಾಡಿ ಒಂದಿಷ್ಟು ಹೆಚಿಗೀ ನೀರು ಬಿಟ್ರೀ ಅಂದ್ರ ಕಾಯಿಪಲ್ಯಾ ಕೊಡತೇನಂತ.

ರಾಧಾ : ಏನ ಬ್ಯಾಡೇಳ್ರಿ. ಪ್ಯಾಟ್ಯಾಗ ಕಾಯಿಪಲ್ಲ್ಯೇಕ್ಕೇನು ಧಾಡಿ. ಒಂದಲ್ಲದ ಹಂಗ ಎರಡು ರೂಪಾಯಿ ಒಗದರ ಬೇಕಾದ್ದ ಕಾಯಿಪಲ್ಯಾ ಸಿಗತದ. ಅದಲ್ಲ, ನಿಮ್ಮನ್ನ ಕೇಳಬೇಕಾಗಿದ್ದದ್ದು. ಅಲ್ರೆಪಾ, ನಿಮ್ಮ ಮನೀ ಕಸಾ ಎಲ್ಲಾ ನಮ್ಮ ಮನೀ ಅಂಗಳದಾಗ ಯಾಕ ಹಾಕತೀರಿ? ನಿಮ್ಮ ಮನೀ ಮುಂದ ಮುನಸೀಪಾಲ್ಟೀ ಡಬ್ಬೀ ಅದ ಅಲ್ಲಾ?

ಗೋಪಿ : ಅದ ಖರೇ. ಆದರ ಅದನ್ನ ಎರಡು ತಿಂಗಳದಿಂದ ಖಾಲೀ ಮಾಡಿಲ್ಲ.

ರಾಧಾ : ಅದಕ್ಕ ನಿಮ್ಮ ಮನೀ ಹೊಲಸೆಲ್ಲಾ ಮಂದೀ ಮನ್ಯಾಗ ಹಾಕಬೇಕೇನು?

ಗೋಪಿ : ಛೇ, ನೀವೇನು ಮಂದಿ ಏನು?

ರಾಧಾ : ಏನು ಹಂಗಂದ್ರ?

ಗೋಪಿ : (ರಾಧೆಯನ್ನು ಅಣಕಿಸುತ್ತ) ಏನು ಹಂಗಂದ್ರ? ಸ್ವಲ್ಪ ತಿಳಕೊಳ್ಳಲಿಕ್ಕೆ ಪ್ರಯತ್ನ ಮಾಡಿರಲ್ಲ?

ರಾಧಾ : (ಸಿಟ್ಟಿನಿಂದ) ಇಲ್ಲೆ ನೋಡ್ರಿ ಹಣಮಂತರಾವ್! ನಿಮ್ಮದು ಇದS ರೀತೀ ಮುಂದುವರೀತೂ ಅಂದ್ರ ಮನೀ ಮಾಲೀಕಗ ಹೇಳಬೇಕಾಗತದ.

ಗೋಪಿ : ಮನೀ ಮಾಲಿಕಗ ಹೇಳತೀರಾ? ಹೇಳ್ರಿ. ಹೇಳಿ ಏನು ಹರಕೋತೀರೆಪಾ?

ರಾಧಾ : ಹೇಳಿ, ನಿಮ್ಮನ್ನ ಇಲ್ಲಿಂದ ಅಟ್ಟಿಸತೇನಿ!

ಗೋಪಿ : (ತಾನೂ ಸಿಟ್ಟಿಗೆದ್ದು) ನನ್ನ ಮನಿಯಿಂದ ನನ್ನ ಅಟ್ಟಿಸಲಿಕ್ಕೆ ನೀ ಯಾರೋ? ಕೊಡೋ ಬಾಡಿಗೀ ಪೃಷ್ಠದ ತೆಳಗ ಹಾಕಿಕೊಂಡು ನನ್ನ ಮುಂದ ಹೇಳತೀ?

ರಾಧಾ : ನಾ ಬಾಡಿಗೀ ಕೊಡ್ಲೀ, ಬಿಡ್ಲೀ. ನೀ ಯಾರು ಅದನ್ನ ಕೇಳಲಿಕ್ಕೆ? ನೀ ಏನು ಮಾಲೀಕನ ಏಜಂಟ್ ಏನು?

ಗೋಪಿ : ಏಯ್, ಬಾಯಿ ಬಿಗಿ ಹಿಡಿದು ಮಾತಾಡೂ ಅಂದೆ! ಇಲ್ಲಾ ಅಂದ್ರ ಕೈಯಾಗ ಏನು ಅದ ನೋಡು!

ರಾಧಾ : ಏನು ಮಾಡತೀಯೋ ರಾಸ್ಕಲ್! ಮಾಡ ಬಾ, ನಾನೂ ನೋಡೇ ಬಿಡತೇನೀ! (ತೋಳು ಏರಿಸುತ್ತಾಳೆ.)

ಗೋಪಿ : ಬಂದೆ ತಡೀ! ಆಗೇ ಹೋಗ್ಲಿ ಒಂದು ಸರ್ತೆ.

ತಾನೂ ತೋಳು ಏರಿಸಿ ಮುನ್ನುಗ್ಗುತ್ತಾನೆ.

ಇಬ್ಬರೂ ಕ್ಷಣ ಹೊತ್ತು ಒಬ್ಬರನ್ನೊಬ್ಬರು ದುರುಗುಟ್ಟಿ ನೋಡುತ್ತಾರೆ.

ರಾಧಾ : ಚಾಳೀ ಠೂ!

ಗೋಪಿ : ಪಾಲಾ ಪೂ!

ರಾಧಾ : ಉಳ್ಳಾಗಡ್ಡೀ ಪಾನಪಟ್ಟೀ...

ಗೋಪಿ : ಠೂ, ಠೂ!

ಇಬ್ಬರೂ ನಗುತ್ತಾರೆ.

ನಗುತ್ತ ಕೈ ಕೈ ಹಿಡಿದುಕೊಂಡು ರಂಗದ ಮಧ್ಯ ಬಂದು ಬಗಾಟಬಗರಿ ಆಡುತ್ತಾರೆ.

ರಾಧಾ : ಉಳ್ಳಾಗಡ್ಡೀ...

ಪಾನಪಟ್ಟೀ...

ಚಾಳೀ ಠೂ...

ಪಾಲಾ ಪೂ...

ತೆರೆ

● ●

ಡಾ. ಬಿ. ಟಿ. ದೇಸಾಯಿ, ಅಮೃತಾ, ೨೩೦, ರಾಣಿ ಚೆನ್ನಮ್ಮ ನಗರ, ಧಾರವಾಡ-೫೮೦ ೦೦೧

# ಪುಸ್ತಕ ಪರಿಶೀಲನೆ

## ೧. *ತಪ್ಪಂಡ* : ಡಾ. ಬಸವರಾಜ ಸಾದರ

ಲೋಹಿಯಾ ಪ್ರಕಾಶನ, ಕಪ್ಪಗಲ್ಲು ರಸ್ತೆ, ಬಳ್ಳಾರಿ-೩, ಪ್ರ.ಮು. ೨೦೦೨, ಪು. ೧೦೪, ರೂ. ೪೫ /-

ಬಸವರಾಜ ಸಾದರ ಅವರ 'ತಪ್ಪಂಡ' ಕಥಾ ಸಂಕಲನವು ಆರು ಕತೆಗಳನ್ನೊಳಗೊಂಡಿದೆ. ಇಲ್ಲಿರುವ ಬಹಳಷ್ಟು ಕತೆಗಳು ಪ್ರಮುಖ ಪತ್ರಿಕೆಗಳ ಕಥಾಸ್ಪರ್ಧೆಯಲ್ಲಿ ಬಹುಮಾನ ಗಳಿಸಿದಂತಹವು. ಬಸವರಾಜ ಸಾದರ ಅವರು ರೂಪಕ ಪ್ರತಿಮೆಗಳ ಮೂಲಕ ಹೇಳುವ ಕಥನಕಲೆಯನ್ನು ರೂಢಿಸಿಕೊಂಡಿದ್ದಾರೆ. ಇಲ್ಲಿನ ಕತೆಗಳ ಹೆಚ್ಚು ಪಾತ್ರಗಳು ಬದುಕಿನಲ್ಲಿ ಬಲಿಪಶುಗಳಾದ ನೋವು ಅವಮಾನಗಳಿಗೀಡಾದ ಪರಕೀಯತೆಗಳಿಂದ ತೊಳಲಾಡುವ ವ್ಯಕ್ತಿಗಳಾಗಿವೆ. ಸಾಂಸ್ಕೃತಿಕ ಕಲಾತ್ಮಕ ಮತ್ತು ಸಾಹಿತ್ಯ ಶಕ್ತಿಗಳು ಪುನರ್‌ಮಿಲನಗೊಂಡು ಇಲ್ಲಿನ ಕತೆಗಳು ಅನನ್ಯವಾಗಿವೆ.

ಬಹುಸಂಖ್ಯಾತ ಬಡವರನ್ನು ಮರುಳು ಮಾಡುವ ಮೂಲಕ ಅವರ ಸಹಕಾರದಿಂದಲೇ ಅವರನ್ನೇ ಆಳುತ್ತಾ ಸದಾ ಅಧಿಕಾರ ಚಲಾಯಿಸಲು ಅವರಿಂದಲೇ ಒಪ್ಪಿಗೆಯನ್ನು ಪಡೆಯುವ ನಿರ್ದಿಷ್ಟ ಗುಂಪೊಂದರ ಹುನ್ನಾರಗಳನ್ನು ಬಯಲು ಮಾಡುವುದೇ 'ತಪ್ಪಂಡ' ಕತೆಯ ಆಶಯ. ಈ ಕತೆಯಲ್ಲಿ ಬರುವ ಶೆಟ್ಟರ ಸಂಗಪ್ಪ, ದೊಡ್ಮಠದ ಮಲ್ಲಯ್ಯನವ್ರು, ಜೋಯಿಸರ ಗುಂಡಾಚಾರ್‍ರು, ಪೋಲೀಸ್ ಪಾಟೀಲ ರಂಗನಗೌಡ್ರು, ಸಾವ್ಕಾರ ಶಿವಣ್ಣನವ್ರು, ಗೌಡ್ರ ಮಾಸ್ತರು ಇವರೆಲ್ಲರೂ ಒಂದು ಗುಂಪಾಗಿ ಬಸಲಿಂಗನಂತಹ ಕೆಳಜಾತಿ/ವರ್ಗವನ್ನು ಹಿಡಿತದಲ್ಲಿಟ್ಟುಕೊಳ್ಳಲು ನಡೆಸುವ ಹುನ್ನಾರಗಳನ್ನು ಅನಾವರಣ ಮಾಡುವ ಈ ಕತೆಯು ರೂಪಕ ಇಲ್ಲವೇ ಪ್ರತಿಮೆಯಂತೆ ಮೈತಳೆದಿದೆ.

ಗಾಂಧೀಪ್ರಣೀತ ಆರ್ಥಿಕ ಮತ್ತು ಸಾಮಾಜಿಕ ದೃಷ್ಟಿಕೋನದ ಆಶಯವುಳ್ಳ 'ಬಿಕ್ರ' ಕತೆ 'ಸರ್ವರ ಸರ್ವಹಿತ' ಎಂಬ ಸಾಮಾಜಿಕ ಆರ್ಥಿಕ ವಿಚಾರಗಳನ್ನು ಅಭಿವ್ಯಕ್ತಿಸಿರುವ ಕತೆ. ಬಿಕ್ರ ಸಾಮಾಜಿಕ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದವನು. ಸಣ್ಣಪ್ಪ ಆರ್ಥಿಕವಾಗಿ ಮುಂದುವರಿದವನು, ಇವನಿಗೆ ಹಣ ಸಂಪಾದನೆ ಮುಖ್ಯ. ಬಿಕ್ರನಿಗೆ ತುತ್ತಿನ ಚೀಲ ತುಂಬಿಸಿಕೊಳ್ಳಲು ಹಣ ಬೇಕು. ಸಣ್ಣಪ್ಪ ಖಾಸಗಿ ಸ್ಮಶಾನ ತೆಗೆದು ಹೆಣ ಸುಡಲು ಇಂತಿಷ್ಟು ಹಣ ಎಂದು ನಿಗದಿ ಮಾಡುತ್ತಾನೆ. ಹೆಣ ಸುಡುವ ಬಿಕ್ರನಿಗೆ ಹೆಣಕ್ಕೆ ಇಂತಿಷ್ಟು ಎಂದು ಹಣ ಸಿಗುತ್ತದೆ. ಇಬ್ಬರಿಗೂ ಹೆಣ ಬಂದರೆ ಹಣ. ಅದಕ್ಕಾಗಿ ಅವರು ಜನ ಸಾಯಬೇಕೆಂದು ನಿರೀಕ್ಷಿಸುತ್ತಾರೆ. ಇದು ಅನೈತಿಕ ಮಾರ್ಗದಿಂದ ಹಣ ಸಂಪಾದನೆಯ ದಾರಿ. ಇಲ್ಲಿರುವ ಸಂಭಾಷಣೆ, ಘಟನೆಗಳು, ವರ್ಣನೆಗಳು ಎಲ್ಲವೂ ಸೇರಿ ಹೊರಹೊಮ್ಮಿಸುವ ಅರ್ಥ ಬಹಳ ಮುಖ್ಯವಾದದ್ದು.

ಈ ಸಂಕಲನದ ಮತ್ತೊಂದು ಅತ್ಯುತ್ತಮ ಕತೆ 'ಬೆಳಕು ಮಬ್ಬಿನ ಹೆಜ್ಜೆಯಾಟ'. ಇಲ್ಲಿ ಬರುವ ದೊಡ್ಡ ಮರ, ಸಮುದ್ರದ ಪರಿಸರ, ಅಲ್ಲಿರುವ ಆತ ಮತ್ತು ಆಕೆ ಇವರ ಮೂಲಕ ಸೃಜನಶೀಲತೆಯ ವಾಸ್ತವಗಳನ್ನು ಬಿಚ್ಚಿಡುವುದರ ಜೊತೆಗೆ ಬದುಕಿನಲ್ಲಿರುವ ಭಾವುಕತೆ ಮತ್ತು ವಾಸ್ತವಗಳ ಅರಿವನ್ನು ಮೂಡಿಸುತ್ತದೆ. ಸೃಜನಶೀಲ ಕೃತಿಯಲ್ಲಿ ಭಾವನೆ ಕನಸು-ಕಲ್ಪನೆಗಳಿಷ್ಟರಷ್ಟೇ ಸಾಲದು. ಅದು ಬದುಕಿನ ಆಳಕ್ಕೆ ಇಳಿದು ಎಲ್ಲಾ ಮಗ್ಗುಲಗಳನ್ನು ಶೋಧಿಸಬೇಕು. ಆಗ ಮಾತ್ರ ಅದು ಸಫಲ ಬರೆಹವಾಗುತ್ತದೆ. ಓದುಗನಿಗೆ ಬದುಕಿನ ಕಟುವಾಸ್ತವದ ಅರಿವನ್ನು ಮೂಡಿಸುತ್ತದೆ. ಇಲ್ಲದಿದ್ದರೆ ಬರೀ ಭಾವುಕತೆ ತುಂಬಿದ್ದರೆ ಮನುಷ್ಯನಿಗೆ ಬದುಕಿನ ವಿವರಗಳು ಲಭ್ಯವಾಗದೆ ಕನಸಿನ ಲೋಕದಲ್ಲಿಯೇ ಮುಳುಗಿ ಹೋಗಿ ಬದುಕಿನಲ್ಲಿರುವ ಇತರೆ ಮಗ್ಗುಲಗಳನ್ನು ಕಾಣದೆ ಹೋಗಬಹುದು.

'ಮಟ್ಟಿ ಪೇಣ್ಸೇಲು' ಎಂಬ ಮತ್ತೊಂದು ಕತೆಯು ಗ್ರಾಮಾಂತರ ಪ್ರದೇಶಕ್ಕೆ ರಾಜಕೀಯ ಪ್ರವೇಶ ಮಾಡಿ ಅಣ್ಣತಮ್ಮಂದಿರಲ್ಲೇ ದ್ವೇಷಾಸೂಯೆಗಳನ್ನು ಬಿತ್ತುವುದನ್ನು ಹೇಳುತ್ತಲೇ ಅಲ್ಲಿನ ನೈಸರ್ಗಿಕ

ಸಂಪತ್ತು ಹಾಳಾಗುತ್ತಿರುವುದರಿಂದುಂಟಾಗುವ ದುಷ್ಪರಿಣಾಮಗಳನ್ನು ಅನಾವರಣಗೊಳಿಸುತ್ತದೆ. ಚಿಕ್ರ ಕತೆಯಂತೆ ಅನೈತಿಕವಾಗಿ ಹಣ ಮಾಡುವುದನ್ನು ವಿಡಂಬಿಸುವ, ಕುಟುಂಬಗಳು ವಿಘಟನೆಯತ್ತ ಸಾಗಿ ಮಾನವೀಯ ಸಂಬಂಧಗಳು ನಾಶವಾಗುವ ಪರಿಯನ್ನು ಅನನ್ಯವಾಗಿ ಅಭಿವ್ಯಕ್ತಿಸುವ ಈ ಕತೆಯು ಜಾಗತೀಕರಣದ ಫಲಿತಗಳನ್ನು ಸಹ ಅಂತರ್ಗತ ಮಾಡಿಕೊಂಡಿದೆ.

–ಎಚ್. ದಂಡಪ್ಪ, ವಾಣಿಜ್ಯ ತೆರಿಗೆ ಸ. ಆಯುಕ್ತರು, ೧ನೇ ವೃತ್ತ, ಡಿ.ಸಿ.ಕಂಪೌಂಡ್, ಧಾರವಾಡ-೧

## *೨. ಜಾನ್ ಎಮ್. ಸಿಂಗ್ ಅವರ ಎರಡು ನಾಟಕಗಳು :* ಶ್ರೀನಿವಾಸ್ ವಿ. ಸುತ್ರಾವೆ

ವಿನಯ್ ಪ್ರಕಾಶನ, ೧೬೪೬/೧ಡ, ವಿದ್ಯಾನಗರ, ದಾವಣಗೆರೆ-೫, ಪ್ರ.ಮು.೨೦೦೨, ಪು.೫೪, ರೂ.೩೫/-

೧೯೦೪ ರ ಪ್ರಥಮ ಪ್ರದರ್ಶನದಿಂದ ಮೊದಲ್ಗೊಂಡು, ಇಡೀ ಶತಮಾನದುದ್ದಕ್ಕೂ ಜೆ. ಎಮ್. ಸಿಂಜ (Synge)ರ Riders to the Sea ಸಾಹಿತ್ಯಾಸಕ್ತರಿಗೆಲ್ಲ ತಪ್ಪಿಸಿಕೊಳ್ಳಲಾಗದ ಒಂದು ಮಹತ್ವದ ಮಾನವೀಯ ಅನುಭವವಾಗಿದೆ. ಆರನ್ ದ್ವೀಪದ 'ಸದಾ ಸಾವಿನ ಸನಿಹದಲ್ಲೇ' ಬದುಕುವ ಅನಿವಾರ್ಯತೆಯ ಜನರ ಕಷ್ಟಕರ ಜೀವನದ ಗಾಢ ಪರಿಚಯ ಹಾಗೂ ಅಭ್ಯಾಸದ ನಂತರ Synge ಬರೆದ ನಾಟಕ(ಏಕಾಂಕ)ಗಳಲ್ಲೇ ಅಪ್ರತಿಮವಾದುದು Riders to the Sea. ಮನ ಕಲಕುವ ದುರಂತಮಯ ಬಾಳು ಆರನ್ ದ್ವೀಪದ ಜನರದು. ಸಮುದ್ರ ಅವರಿಗೆ ಅನ್ನದಾತನಾಗಿರುವಂತೆಯೇ, ಅವರ ಸಾವಿಗೂ ಕಾರಣ. ಈ ದ್ವೀಪದ ಜನ ರುದ್ರಕಾರುಣ್ಯರಹಿತ ಪ್ರಕೃತಿ-ಸಮುದ್ರದಿಂದ ಬರುವ ಸಾವನ್ನು ಸ್ವೀಕರಿಸುವ ರೀತಿ, ಅದರಿಂದಾಗಿ ಅವರಲ್ಲಿ ವಿಶೇಷವಾಗಿ ಹೆಣ್ಣುಮಕ್ಕಳಲ್ಲಿ ಬೆಳೆದ ಮನೋಧರ್ಮ, ಒಂದು ರೀತಿಯಲ್ಲಿ ಪ್ರಕೃತಿಯ ಆಹ್ವಾನ ಸ್ವೀಕರಿಸುವ ದಿಟ್ಟ ಮನೋಧರ್ಮ— ಈ ಗಂಭೀರ ಹಿನ್ನೆಲೆಯಲ್ಲಿಯೂ ಎದ್ದು ಕಾಣುವಂತೆ ಮೂಡಿಬರುವ ಅಲ್ಲಿಯ ಜನರ ಸರಳತೆ, ಸಹಜತೆ ಈ ನಾಟಕವನ್ನು ಶ್ರೇಷ್ಠ ಕೃತಿಯನ್ನಾಗಿಸಿದೆ. ಹೇಳಬೇಕಾದ ಮಾತೆಂದರೆ ಸುತ್ರಾವೆ ಅವರ ಭಾಷಾಂತರ. ಅವರು ಮೂಲ ನಾಟಕದ ಸರಳತೆ, ಗಂಭೀರತೆ ಹಾಗೂ ಕಾವ್ಯಮಯತೆಯನ್ನು ಅಪರೂಪವೆನ್ನಿಸುವಂತೆ ಹಿಡಿದಿದ್ದಾರೆ; ಕನ್ನಡದಲ್ಲಿ ಈ ನಾಟಕವನ್ನು 'ಸಮುದ್ರಕ್ಕೆ ಸವಾರರು' ಎಂದು ಕರೆದು.

The Shadow of the Glen, ಕನ್ನಡದಲ್ಲಿ **ಕಣಿವೆಯ ಕತ್ತಲು,** ಹಾಗೆ ನೋಡಿದರೆ Synge ನ ಮೊದಲ ನಾಟಕ. If suggestivity is the essence and strength of poetry, ನಾಟಕ ನಿಜವಾಗಿಯೂ ಅತ್ಯಂತ ಕಾವ್ಯಮಯವಾಗಿದೆ. ನಾಟಕದ ಸುರುವಾತಿನಲ್ಲಿ ಅದರ ಪ್ರಮುಖ ಪಾತ್ರಗಳು ಪರಸ್ಪರರನ್ನು 'ಆಗಂತುಕರೆ', 'ಯಜಮಾನಿಯವರೆ' ಎಂದು ಸಂಬೋಧಿಸುವಲ್ಲಿ ಕಂಡುಬರುವ ಕೃತ್ರಿಮತೆ, ನಾಟಕವನ್ನು ಓದುತ್ತ ಮುಂದುವರಿದಂತೆಲ್ಲ ನೆನಪಿಗೇ ಬರುವದಿಲ್ಲ. ಮುದುಕ ಪತಿ ಬರ್ಕ್, ಸತ್ತಂತೆ ನಟಿಸಿ ತನ್ನ ಹೆಂಡತಿ ನೋರಾಳಿಗೆ ಅವಳನ್ನು ಪ್ರೀತಿಸುತ್ತಿರುವಂತೆ ತೋರಿಸುವ ದಾರಾನ ಬದಲಾಗಿ ಅಲೆಮಾರಿಯೊಂದಿಗೆ (ದೂರ) ಹೋಗಲು ಅವಕಾಶ ಮಾಡಿಕೊಡುವ ವಿಚಿತ್ರವೆನಿಸುವ ನಿರ್ಣಯ— ಮೂಲ ಜಾನಪದ ಕತೆಯಾದರೂ— ಸಹಜ ಹಾಗೂ ಸರಿ ಎಂದು ನಾವು ಒಪ್ಪಿಕೊಳ್ಳುವಂತೆ ಮಾಡುವದು ನಿಜವಾಗಿಯೂ ದೊಡ್ಡ ಸಾಧನೆ. ಇದನ್ನು ಸಾಧ್ಯ ಮಾಡುವ ಭಾಷಾಂತರ ಶ್ಲಾಘನೀಯ.

## *೩. ಒಂದು ಕರ್ಮ ಕಥೆ :* ಜಿ. ಜೆ. ಹರಿಜಿತ್

ಸಪ್ನಾ ಲಾ ಪ್ರಕಾಶನ, ೮೦, ಪೆಟ್ಟಿಗೆ-೮೫೧೭, ಬೆಂಗಳೂರು-೮೫, ಪ್ರ.ಮು. ೨೦೦೨, ಪು.೧೬೨, ರೂ.೪೦/-

ಕ್ರಿ.ಶ. ೫ ನೆ ಶತಮಾನದಲ್ಲಿ ಮಗಧ ಸಮ್ರಾಟರ ಕಾಲದಲ್ಲಿ ನಡೆದ ಕೆಲವು ಐತಿಹಾಸಿಕ ಘಟನೆಗಳು ಈ ನಾಟಕದ ಸಾಮಗ್ರಿ. ಒಂದು ಕಡೆಯಿಂದ ಹೊರಗಿನ ಅಸಭ್ಯ ಬರ್ಬರ ಹೂಣರ ಆಕ್ರಮಣ, ಮತ್ತೊಂದೆಡೆ ವೈಷ್ಣವ ರಾಜವಂಶದ ಆಳ್ವಿಕೆ ಕೊನೆಗೊಳ್ಳದ ವರೆಗೆ 'ಸದ್ಧರ್ಮದ ಉದ್ಧಾರವಿಲ್ಲ' ಎಂದು

ಸಂಚು, ಕೀಳು ಮನೋಭಾವದ ವ್ಯಕ್ತಿಯೊಬ್ಬ ಧರ್ಮದ ಹೆಸರಿನಲ್ಲಿ ದೇಶದ್ರೋಹಿಯಾಗಿ ಮಗಧ ಸಾಮ್ರಾಜ್ಯವನ್ನು ಮುಳುಗಿಸಲು ನಡೆಸುವ ಒಳಸಂಚು: ಮಾತೃಭೂಮಿಗೆ, ಅದು ಪ್ರತಿನಿಧಿಸುವ ಸಂಸ್ಕೃತಿಗೆ ನಿಷ್ಠರಾದ ಹಲವರು ಬುದ್ಧಿವಂತಿಕೆಯಿಂದ, ಶೌರ್ಯದಿಂದ ಚಾಣಾಕ್ಷತೆಯಿಂದ ಇವುಗಳನ್ನು ಎದುರಿಸುವ ರೋಮಾಂಚಕ ಘಟನೆಗಳು ಈ ನಾಟಕಕ್ಕೆ ಆಧಾರವಾಗಿವೆ. ಇವಲ್ಲದೆ ಅಧಿಕಾರದಲ್ಲಿದ್ದ ಕೆಲವರ ವೈಯಕ್ತಿಕ ವ್ಯಾಮೋಹ, ಜಾತಿವ್ಯವಸ್ಥೆ, ಆಸಕ್ತಿ ಕೆರಳಿಸುವಂತೆ ರೂಪಿಸಲಾದ ಹೆಣ್ಣುಮಕ್ಕಳ ಪಾತ್ರಗಳು ಈ ನಾಟಕವನ್ನು ಕೃತ್ರಿಮವಾಗದೆ ರಂಜನೀಯವಾಗುವಂತೆ ಮಾಡಿವೆ. ಮಾತೃಭೂಮಿ, ದೇಶಭಕ್ತಿಯಂತಹ ಕಲ್ಪನೆಗಳು ಇಂದಿಗೂ ಪ್ರಸ್ತುತವೆಂದು ನಂಬಿರುವ ಹರಿಜಿತ್‌ರು, ಉತ್ಪ್ರೇಕ್ಷೆಯಿಲ್ಲದೆ ನಾಟಕದ ಹಲವು ಸಂದರ್ಭಗಳಲ್ಲಿ ಅವುಗಳತ್ತ ನಮ್ಮ ಲಕ್ಷ್ಯ ಸೆಳೆಯುವವಲ್ಲದೆ, ಸ್ವಲ್ಪ ಮಟ್ಟಿಗೆ ಚಿಂತನೆಗೂ ಹಚ್ಚುತ್ತಾರೆ. ಬಹಳಷ್ಟು ಪಾತ್ರಗಳು, ನಾಟಕದ ಘಟನೆಗಳು ನಡೆಯುವ ದೀರ್ಘ ಕಾಲಕ್ರಮ ಇವುಗಳನ್ನು ಇಟ್ಟುಕೊಂಡು ಕೂಡ, ರಂಗದ ಮೇಲೆ ಯಶಸ್ವಿಯಾಗಿ ತರಲು ಸಾಧ್ಯವಾಗಿಸುವಂತಿದೆ `ಒಂದು ಕರ್ಮ ಕಥೆ'.

**—ದುಷ್ಯಂತ ನಾಡಗೌಡ, ವೆಂಕಟಾದ್ರಿ, ೧೨೪, ೨ನೇ ಮೇನ್ ಗಾಂಧೀನಗರ, ಧಾರವಾಡ - ೪**

## *೪. ಬಿಚ್ಚಿದ ಜೋಳಿಗೆ :* ಡಾ. ಸ. ಜ. ನಾಗಲೋಟಿಮಠ

**ಅತ್ರಿ ಬುಕ್ ಸೆಂಟರ್, ೪, ಶರಾವತಿ ಕಟ್ಟಡ, ಬಲ್ಮಠ, ಮಂಗಳೂರು-೧. ಪ್ರ.ಮು. ೨೦೦೩, ಪು. ೩೦೪, ರೂ. ೭೫/-**

'ಬಿಚ್ಚಿದ ಜೋಳಿಗೆ' ಡಾ. ಸ. ಜ. ನಾಗಲೋಟಿಮಠರ ಆತ್ಮಕಥೆ. ಕೇವಲ ಸಾಹಿತಿಗಳು, ಸೃಜನಶೀಲ ಬರಹಗಾರರ ಸ್ವತ್ತಾಗಿದ್ದ ಆತ್ಮನಿವೇದನೆಗೆ ಈಗ ಬೇರೆ ಕ್ರಿಯಾಶೀಲ ವ್ಯಕ್ತಿಗಳು ಕೈ ತೊಡಗುತ್ತಿರುವುದು ಆರೋಗ್ಯಕರ ಬೆಳವಣಿಗೆ. ವ್ಯಕ್ತಿ ಎಷ್ಟೇ ದೊಡ್ಡವನಾಗಿ ಬೆಳೆದಿದ್ದರೂ ಬರವಣಿಗೆಯ ಕಲೆ ಸಾಧಿಸುವದು ಎಲ್ಲರಿಗೂ ಸಾಧ್ಯವಿಲ್ಲ. ಅದರಲ್ಲೂ ಆತ್ಮಕಥೆಯಂತಹ ಸ್ವನಿರೂಪಣಾತ್ಮಕ ಬರವಣಿಗೆ ತೀರ ಕ್ಲಿಷ್ಟಕರ. ಆತ್ಮನಿರೂಪಕನು ಸ್ವಪ್ರಶಂಸೆಯ ಗಡಿದಾಟಿ ನಿಲ್ಲಬೇಕಾಗುತ್ತದೆ. ಆತ್ಮಸಾಕ್ಷಿ, ಸತ್ಯಕ್ಕೆ ಅಪಚಾರವಾಗದಂತೆ ತಾನು ಮತ್ತು ತನ್ನ ಒಡನಾಟಕ್ಕೆ ಬಂದ ವ್ಯಕ್ತಿಗಳು, ಘಟನೆಗಳು, ಸಂಸ್ಥೆಗಳ ಬಗ್ಗೆ ಲೇಖಕ ಹದವರಿತು ನಿರೂಪಣೆ ಮಾಡಬೇಕಾಗುತ್ತದೆ. ಕೆಲವೊಮ್ಮೆ ಕಹಿ, ಮುಜುಗರ ಎನಿಸುವ ಘಟನೆಗಳನ್ನು ಸಹ ನಿರೂಪಿಸಬೇಕಾಗುತ್ತದೆ. ಈ ದಿಶೆಯಲ್ಲಿ ನಾಗಲೋಟಿಮಠ ಅವರದು ಅಪರೂಪದ ಆತ್ಮಕಥೆ.

ಡಾ. ನಾಗಲೋಟಿಮಠ ಕರ್ನಾಟಕದ ವೈದ್ಯಕೀಯ ಕ್ಷೇತ್ರದಲ್ಲಿ ದೊಡ್ಡ ಹೆಸರು. ನಾಡಿನ, ದೇಶದ ದೊಡ್ಡ ಪೆಥಾಲಜಿಸ್ಟ್ ಆಗಿ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ಬುದ್ಧಿ ಮತ್ತು ಅಪೂರ್ವ ಸಂಶೋಧನೆಗಳಿಂದ ಗಮನಾರ್ಹ ಸಾಧನೆ ಮಾಡಿ ತೋರಿದವರು. ಒಳ್ಳೆಯ ವೈದ್ಯಶಿಕ್ಷಕರಾಗಿ, ಸಂಶೋಧಕರಾಗಿ, ಆಡಳಿತಾಧಿಕಾರಿಯಾಗಿ ತಮ್ಮ ನಿಷ್ಠೆ, ಶ್ರದ್ಧಾಪೂರ್ವಕ ದುಡಿಮೆಯಿಂದ ವೈದ್ಯವೃತ್ತಿಗೆ ಗೌರವ ತಂದವರು. ಮೇಲಾಗಿ ಓರ್ವ ಒಳ್ಳೆಯ ವ್ಯಕ್ತಿ, ಸಜ್ಜನ. ಸಾಮಾನ್ಯರೊಳಗೆ ಸಾಮಾನ್ಯರಾಗಿ ಬದುಕುತ್ತಿರುವ ಅವರ ಆತ್ಮನಿವೇದನೆ ಕೂಡ ಸರಳ, ಸುಂದರ, ಸಹಜ.

ಸ್ವಾತಂತ್ರ್ಯೋತ್ತರದ ೫೦ ರಿಂದ ೭೦ ರ ಮೂರು ದಶಕಗಳು ಶಿಕ್ಷಣ ಕ್ಷೇತ್ರದ ಅದರಲ್ಲೂ ಉತ್ತರ ಕರ್ನಾಟಕದ ಶಿಕ್ಷಣ ಕ್ಷೇತ್ರದ ತೀರ ಕಠಿಣ ದಶಕಗಳು. ಯಾವುದೇ ಹೆಚ್ಚಿನ ಶೈಕ್ಷಣಿಕ ಸೌಲಭ್ಯಗಳಿಲ್ಲದ ಆ ಭಾಗದಲ್ಲಿ ಮೂಲ ಶಿಕ್ಷಣ, ತಾಂತ್ರಿಕ ಶಿಕ್ಷಣ, ಉನ್ನತ ಶಿಕ್ಷಣ ಸಂಸ್ಥೆಗಳನ್ನು ಕಟ್ಟಲು ಹೆಣಗಾಡುತ್ತಿದ್ದ ಮಹನೀಯರು ಒಂದು ಕಡೆಗಿದ್ದರೆ, ಕಿತ್ತು ತಿನ್ನುವ ಬಡತನದ ನಡುವೆ ಹೇಗಾದರೂ ಮಾಡಿ ಉನ್ನತ ಶಿಕ್ಷಣ ಪಡೆಯುವ ಛಲ ಹೊತ್ತ ವಿದ್ಯಾರ್ಥಿಗಳ ಪಡೆ ಮತ್ತೊಂದು ಕಡೆಗಿತ್ತು. ಕಿತ್ತು ತಿನ್ನುವ ಬಡತನದಲ್ಲಿ ಹುಟ್ಟಿ (ಜ. ೧೯೪೦, ಗದಗ) ತಮ್ಮ ಬಾಲ್ಯವನ್ನು ಅಂದಿನ ವಿಜಾಪುರ ಜಿಲ್ಲೆಯ ಬನಹಟ್ಟಿಯಲ್ಲಿ ಕಳೆದು, ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನು ಅಲ್ಲಿಯೇ ಪೂರೈಸಿ,

ಎಳೆವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ ನಾಗಲೋಟಿಮಠರು ತಮ್ಮ ತಂದೆಯ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ಖಾಯಂ ಆಗಿ ನೆಲೆಯೂರದೇ ಹೋದದ್ದು ನಾಡಿನ ಸುದೈವ. ಆಗಿನ ಕಾಲದ ಬಡತನ, ಅದರ ಬವಣೆಗಳನ್ನರಿಯಲು, ಸಮಾಜದಲ್ಲಿರುವ ಮಿತ್ರದ್ರೋಹ, ಸಣ್ಣತನಗಳನ್ನರಿಯಲು ನಾಗಲೋಟಿಮಠರ ಬಾಲ್ಯವನ್ನು ಓದಬೇಕು. ಇಂಥ ಪರಿಸ್ಥಿತಿಯಲ್ಲೇ ನಿಷ್ಠುರ, ನೇರ ನಡೆ ನುಡಿಗಳನ್ನು, ಸ್ವಾಭಿಮಾನವನ್ನು ಮೈಗೂಡಿಸಿಕೊಂಡ ಅವರು ಕೊನೆಯ ವರೆಗೂ ಅದನ್ನು ಉಳಿಸಿ ಬೆಳೆಸಿಕೊಂಡು ಬಂದವರು. ಅದರಿಂದಾಗಿ ತಂದುಕೊಂಡ ಅನಾಹುತಗಳು, ಆಪತ್ತುಗಳು ಹಲವು. ಆದರೂ ಛಲಬಿಡದ ಯೋಗಿಯಂತೆ ನಾಗಲೋಟಿಮಠರು ರೂಪಗೊಂಡುದು ವಿಸ್ಮಯಕರ.

ಬಡತನದ ಬೇಗೆಯಿಂದಾಗಿ ವೈದ್ಯಕೀಯ ಓದು ಮುಂದುವರಿಸುವದು ಅಸಾಧ್ಯವೆಂದು ಕಂಡಾಗ, ಶಿಕ್ಷಣ ಪೂರೈಸಲು ವಿವಾಹ ಬಂಧನಕ್ಕೊಳಗಾಗಿ, ಮಾವನ ನೆರವು ಪಡೆದು ವೈದ್ಯ ಶಿಕ್ಷಣವನ್ನು ಪೂರೈಸುತ್ತಾರೆ. ಕ್ಷಯರೋಗದಿಂದ ತಂದೆಯನ್ನು, ಕ್ಯಾನ್ಸರ್‌ದಿಂದ ತಾಯಿಯನ್ನು ಕಳೆದುಕೊಂಡ ನಾಗಲೋಟಿಮಠರು ಆ ವೇಳೆಯಲ್ಲಿ ಅನುಭವಿಸಿದ ಯಾತನೆ, ಮುಂಬಯಿಯಲ್ಲಿ ಫುಟ್‌ಪಾತ್ ಮೇಲೆ ಮಲಗಿದ್ದು, ತಂದೆ ಸತ್ತಾಗ ತಾಯಿಗೆ ಹೊಡೆದು ಅವಳನ್ನು ಅಳದಂತೆ ಪ್ರತಿಬಂಧಿಸಿದುದು, ಓದುತ್ತ ಹೋದಂತೆ, ಎಷ್ಟೋ ವೇಳೆ ಸತ್ಯ ಕಲ್ಪನೆಗಿಂತಲೂ ಎಷ್ಟು ಭೀಕರ ಎಂದೆನಿಸದೆ ಇರದು.

ಎಂಬಿಬಿಎಸ್ ಮುಗಿಸಿ ವೈದ್ಯ ಕ್ಷೇತ್ರದ ಮೆಡಿಸಿನ್ ಮತ್ತಿತರೇ ಹೆಚ್ಚು ಬೇಡಿಕೆಯ ಕೋರ್ಸುಗಳನ್ನು ಆಯ್ಕೆ ಮಾಡದೇ ಸ್ಪರ್ಧೆ ಇಲ್ಲದ ಅನಾಟಮಿ, ಪೆಥಾಲಜಿ ವಿಷಯಗಳನ್ನು ಆಯ್ದುಕೊಂಡು ನಾಗಲೋಟಿಮಠರು ವಿಭಿನ್ನ ದಾರಿ ತುಳಿಯುತ್ತಾರೆ. ಎಂ.ಡಿ. ಶಿಕ್ಷಣ ಪೂರೈಸುತ್ತಾರೆ. ಡಾ. ಭಾರ್ಗವ ದಂಪತಿಗಳ ಕುಲುಮೆಯಲ್ಲಿ ಒಳ್ಳೆಯ ಬೋಧಕರಾಗಿ ರೂಪಗೊಳ್ಳುತ್ತಾರೆ. ಎಂ.ಡಿ. ಮಾಡುವಾಗ ಶವಪರೀಕ್ಷೆ, ಕುಷ್ಠರೋಗ ಕುರಿತು ವಿಶೇಷ ಅಧ್ಯಯನ. ಹಗಲಿರುಳು ದುಡಿದು ನಿಷ್ಣಾತ ತಜ್ಞರಾಗಿ ಬೆಳೆಯುತ್ತಾರೆ. ತಮ್ಮ ಪರೀಕ್ಷಕರನ್ನೇ ದಂಗುಬಡಿಸುವ ಪ್ರಯೋಗಗಳನ್ನು ಮಾಡಿ ತೋರಿಸಿ ಹೊಸದಕ್ಕೆ ನಾಂದಿ ಹಾಡುತ್ತಾರೆ.

ಎಂ.ಡಿ. ಮುಗಿದ ಮೇಲೆ ಬೆಳಗಾವಿಯ ಜೆಎನ್‌ಎಂಸಿ ಸೇರಿ ಅಲ್ಲಿನ ಪೆಥಾಲಜಿ ವಿಭಾಗವನ್ನು ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟಕ್ಕೆ ಬೆಳೆಸಿದುದು ಡಾ. ನಾಗಲೋಟಿಮಠರ ಹಿರಿಯ ಸಾಧನೆ. ಪೆಥಾಲಜಿ ಮ್ಯೂಸಿಯಂನ್ನು ಅವರು ಕಟ್ಟಿ ಬೆಳೆಸಿದ ಬಗೆ, ಅದು ಗಳಿಸಿದ ಮನ್ನಣೆ ಅವರ ಕರ್ತೃತ್ವ ಶಕ್ತಿಗೆ ಸಾಕ್ಷಿ. ಬೆಳಗಾವಿಯಲ್ಲಿ ಆಯೋಜಿಸಿದ ಪೆಥಾಲಜಿ ಸಮ್ಮೇಳನ ಅವರ ಸಂಘಟನಾಶಕ್ತಿಗೆ ಪ್ರತೀಕವಾಗಿ ನಿಲ್ಲುತ್ತದೆ. ಅವರ ಬೆಳಗಾವಿ ಸೇವಾವಧಿಯ ಕೆಲ ಒಳನೋಟಗಳು ನಮ್ಮ ಗಮನ ಸೆಳೆಯುತ್ತವೆ. ಆದರೂ ಕೆಎಲ್‌ಇ ಸಂಸ್ಥೆ ಅವರನ್ನು ನಡೆಸಿಕೊಂಡ ರೀತಿಯಿಂದ ಅವರು ಬೇಸರಗೊಂಡು ಅಲ್ಲಿಂದ ಹೊರನಡೆಯುತ್ತಾರೆ. ಬೆಳಗಾವಿ ತೊರೆದು ವಿಜಾಪುರದ ಬಿಎಲ್‌ಡಿಇ ಮೆಡಿಕಲ್ ಕಾಲೇಜಿನಲ್ಲಿ, ನಂತರ ಮೈಸೂರಿನ ಜೆಎಸ್‌ಎಸ್ ಸಂಸ್ಥೆಯ ಮೆಡಿಕಲ್ ಕಾಲೇಜಿನಲ್ಲಿ ಸೇವೆ, ಆಮೇಲೆ ಮಾತೃಸಂಸ್ಥೆ ಎಂದು ಹುಬ್ಬಳ್ಳಿಯ ಕೆಎಂಸಿ ಸಂಸ್ಥೆಗೆ ಹೋದದ್ದು, ಅಲ್ಲಿನ ಪಟ್ಟಭದ್ರ ಹಿತಾಸಕ್ತಿಗಳನ್ನು ಎದುರಿಸಿದುದು ಡಾ. ನಾಗಲೋಟಿಮಠರ ಸಾಧನೆಯ ಮೈಲಿಗಲ್ಲುಗಳು. ಕೊನೆಗೆ ಬಾಗಲಕೋಟೆಯ ಬಿವಿವಿ ಸಂಘದ ಮೆಡಿಕಲ್ ಕಾಲೇಜು ಸ್ಥಾಪನೆಗೆ ಮಾಡಿದ ಪ್ರಯತ್ನಗಳೊಂದಿಗೆ ಆತ್ಮನಿವೇದನೆ ಕೊನೆಗೊಳ್ಳುತ್ತದೆ.

ತಮ್ಮ ವ್ಯಕ್ತಿಜೀವನದ ಅಂಗವಾಗಿ ಕೈಗೊಂಡ ಹಲವು ವಿದೇಶ ಯಾತ್ರೆಗಳು, ಅಲ್ಲಿನ ಅನುಭವಗಳನ್ನು ನಾಗಲೋಟಿಮಠರು ಸ್ವಾರಸ್ಯಕರವಾಗಿ ವಿವರಿಸಿದ್ದಾರೆ. ಚೈನಾ ದೇಶದ ಪ್ರವಾಸದ ಬಗ್ಗೆ ಬರೆಯುತ್ತ, "ಇಲ್ಲಿಯ ಜನರು ಯಾವ ಪ್ರಾಣಿಗಳನ್ನೂ, ಕೀಟಗಳನ್ನೂ ಬಿಡುವುದಿಲ್ಲ. ಎಲ್ಲವನ್ನೂ ತಿನ್ನುತ್ತಾರೆ. ಅದು ಇದು ಹೋಗಲಿ, ಮನುಷ್ಯರು ಗರ್ಭಪಾತ ಮಾಡಿ ಬಂದ ಚಿಕ್ಕ ಕೂಸುಗಳನ್ನು ಪ್ರೀತಿಯಿಂದ ತಿನ್ನುತ್ತಾರೆ. ಗರ್ಭಪಾತ ಮಾಡಿದ ವೈದ್ಯರು ಆ ಕೂಸನ್ನು ಪ್ಲಾಸ್ಟಿಕ್ ಚೀಲದಲ್ಲಿ ಹಾಕಿಕೊಂಡು ಮನೆಗೆ ಒಯ್ಯುತ್ತಾರೆ." (ಪುಟ ೨೩೮).

'ಬಿಚ್ಚಿದ ಜೋಳಿಗೆ' ಒಂದು ಅಪೂರ್ವ ಆತ್ಮಕಥನ. ಕೆಲವೆಡೆ ವೈದ್ಯಕೀಯ ವಿಷಯಗಳು, ಸಂಶೋಧನೆಗಳ ವಿವರಗಳು ಸಾಮಾನ್ಯ ಓದುಗರಿಗೆ ಗಹನ; ನಮಸ್ಕಾರ ಚಮತ್ಕಾರಗಳು ಜಾಸ್ತಿ ಅನಿಸಬಹುದು. ಆದರೆ ಸರಳ ಭಾಷೆ, ನೇರ ನಿರೂಪಣೆ ತೀರ ಆಪ್ಯಾಯಮಾನವೆನಿಸುತ್ತವೆ. ಇಂದಿನ ಸರಕಾರಿ, ಸಾರ್ವಜನಿಕ ಜೀವನದಲ್ಲಿ ನೇರ ನಡೆ-ನುಡಿ ಪ್ರಾಮಾಣಿಕ ದುಡಿಮೆ, ಶ್ರದ್ಧೆ, ಪರಸ್ಪರ ಪ್ರೀತಿ ವಿಶ್ವಾಸಗಳು ಮಾಯವಾಗುತ್ತಿರುವಾಗ ನಾಗಲೋಟಿಮಠರ ಜೀವನಕಥನ ಓದುಗರ ಮನ ತಟ್ಟುತ್ತದೆ. ವಿರುದ್ಧ ಪರಿಸ್ಥಿತಿಯಲ್ಲಿ, ಸಹೋದ್ಯೋಗಿಗಳ ಕುಹಕ ನಡೆನುಡಿ, ಅಸೂಯೆಯನ್ನು ಮೀರಿ ನಾಗಲೋಟಿಮಠರು ಬೆಳೆದು ತಮ್ಮ ಪ್ರಾಮಾಣಿಕ ದುಡಿಮೆಯಿಂದ ನೇರ ವ್ಯಕ್ತಿತ್ವದಿಂದ, ಬಡತನವನ್ನು ಹಾಸಿ ಹೊದ್ದರೂ ಆಮಿಷಕ್ಕೆ ಬಲಿಯಾಗದೇ ಉತ್ತುಂಗಕ್ಕೇರಿದ ಹಿರಿಯ ಜೀವ. ಇಂದಿನ ವೈದ್ಯರು, ವೈದ್ಯ ವಿದ್ಯಾರ್ಥಿಗಳು, ಜನಸಾಮಾನ್ಯರು ಓದಲೇಬೇಕಾದ ಗ್ರಂಥ 'ಬಿಚ್ಚಿದ ಜೋಳಿಗೆ'.

**—ವೆಂಕಟೇಶ ಮಾಚಕನೂರ, ಬಿ-೧೦೫, ಜೀವನ ಬೀಮಾ ನಗರ, ಬೆಂಗಳೂರು-೭೫**

## *೫. ದೇವರ ಸವಾಲ್ :* ಪ್ರಹ್ಲಾದ ಅಗಸನಕಟ್ಟೆ

**ಸೂರ್ಯ ಪ್ರಕಾಶನ, ಮಲ್ಲಾಡಿಹಳ್ಳಿ, ಹೊಳಲ್ಕೆರೆ ತಾ., ಜಿ. ಚಿತ್ರದುರ್ಗ, ಪ್ರ.ಮು. ೨೦೦೩, ಪು. ೧೫೭, ರೂ. ೧೨೫/-**

ಪ್ರಹ್ಲಾದ ಅಗಸನಕಟ್ಟೆ ಮೂಲತಃ ದಾವಣಗೆರೆ ತಾಲ್ಲೂಕಿನ ಅಗಸನಕಟ್ಟೆ ಗ್ರಾಮದವರು. ಉದ್ಯೋಗ ನಿಮಿತ್ತ ಹುಬ್ಬಳ್ಳಿಯಲ್ಲಿರುವ ಅವರ ಅನೇಕ ಕತೆಗಳಲ್ಲಿ ದಾವಣಗೆರೆಯ ಸುತ್ತಮುತ್ತಲಿನ ಗ್ರಾಮ್ಯ ಭಾಷೆಯು ಪ್ರಯತ್ನಪೂರ್ವಕ ತೂರಲೆತ್ನಿಸುವ ಧಾರವಾಡ ಭಾಷೆಯನ್ನು ಮೀರಿ, ಅವರಿಗರಿವಿಲ್ಲದೇ ಅವರ ಕಥೆಗಳಲ್ಲಿ ನುಸುಳಿಕೊಳ್ಳುತ್ತದೆ. ಅಗಸನಕಟ್ಟೆಯವರ ೩ನೇ ಕಥಾ ಸಂಕಲನ 'ದೇವರ ಸವಾಲ್'.

೧೨ ಕತೆಗಳ ಈ ಸಂಕಲನದಲ್ಲಿ, 'ಕರ್ತಾರನ ಕಮ್ಮಟ', 'ಬೂಟ್ ಪಾಲೀಶ್ ಹುಡುಗ', 'ದೇವರ ಸವಾಲ್', 'ಕಟ್ಟಲಾಗದ ಮನೆ, ಮಾರಲಾಗದ ಮನೆ', 'ಹಾವ್ರಾಣಿ, ಆರೋಗ್ಯ ಶಿಕ್ಷಕ ಮತ್ತು ಐಸೋಲೇಷನ್ ವಾರ್ಡ್', 'ಕತೆಗಾರನ ಸಾವು' ಪ್ರಮುಖವಾದವು. ಇಲ್ಲಿನ ಅನೇಕ ಕತೆಗಳು ಅವರ ಹಿಂದಿನ ಸಂಕಲನ 'ಕಾಲ'ದ ಮುಂದುವರಿಕೆಯ ಕತೆಗಳಂತೆ ಕಂಡರೂ ಓದುಗನನ್ನು ಒಂದು ಕ್ಷಣ ಸೂಕ್ಷ್ಮಸಂವೇದಿಯನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿವೆ. ಸೂಕ್ಷ್ಮ ವಿಚಾರವೊಂದನ್ನು ಕಥಾವಸ್ತುವಾಗಿ ಬಳಸಿಕೊಂಡು, ಸರಳವಾಗಿ ಪ್ರಾರಂಭವಾಗುವ ಇವರ ಬಹುತೇಕ ಕತೆಗಳು ಓದಿ ಮುಗಿಸುತ್ತಿದ್ದಂತೆಯೇ ನಮ್ಮ ಮನಸ್ಸಿನಾಳಕ್ಕೆ ಇಳಿದು, ಅಲ್ಲಿಯೇ ಕ್ಷಣಕಾಲ ಉಳಿದುಬಿಡುತ್ತವೆ. ಒಂದು ಒಳ್ಳೆಯ ಕತೆ ಮಾಡಬೇಕಾಗಿರುವುದು ಇದನ್ನೇ.

'ಕಾಲ' ಸಂಕಲನದಲ್ಲಿನ 'ಆ ಗಡಿಯಾರ', 'ಕಾಲ' ಮುಂತಾದ ಕತೆಗಳಲ್ಲಿ ಕಂಡುಬರುವ ಗತಕಾಲದ ನೆನಪಿನ ಬುಟ್ಟಿಯನ್ನು ಮೀರಿ ಹೊರಬರಲಾರದೇ ಪರಿತಪಿಸುವ, ಅಪ್ರಾಯದ ಸೂಚನೆ ಅರಿಯುತ್ತಿದ್ದಂತೆಯೇ ಚಿಪ್ಪಿನೊಳಗೆ ಮುದುಡಿಕೊಳ್ಳುವಂತಹ ಮನಸ್ಸಿನ ಕಥಾನಾಯಕ, ಈ ಸಂಕಲನದ 'ಕಟ್ಟಲಾಗದ ಮನೆ, ಮಾರಲಾಗದ ಮನೆ' ಕತೆಯಲ್ಲಿಯೂ ಕಾಣಿಸಿಕೊಳ್ಳುತ್ತಾನೆ. ದಾವಣಗೆರೆಯಂತಹ ನಗರದ ಹೊರವಲಯದಲ್ಲಿ ತಾನು ಖರೀದಿಸಿದ್ದ ಸಣ್ಣ ಸೈಟೊಂದರಲ್ಲಿ, ಮನೆ ಕಟ್ಟಬೇಕೆಂದು ನಿರ್ಧರಿಸಿ, ಅದನ್ನು ಸ್ನೇಹಿತನಿಗೆ ತೋರಿಸುವ ನೆಪದಲ್ಲಿ, ಆ ಧಂಧೆಯ ವಿವಿಧ ಮುಖಗಳನ್ನು ದರ್ಶಿಸುತ್ತಾರೆ. ಕೊನೆಗೆ ಮನೆ ಕಟ್ಟಲು ಹಣಕ್ಕಾಗಿ ಊರಲ್ಲಿದ್ದ ಅಪ್ಪನ ಕಾಲದ ಹಳೆಯ ಮನೆಯನ್ನು ಮಾರಲೆಂದು ಹೋದಾಗ ನಾಯಕನಿಗೆ ಕಾಡುವ ಆ ಬಾಲ್ಯದ ನೆನಪುಗಳು ಯಾಕೆ ಈ ಮನೆಯನ್ನೇ ಅಭಿವೃದ್ಧಿಪಡಿಸಿ ಇಲ್ಲಿಯೇ ಇದ್ದುಬಿಡಬಾರದು ಎಂಬ ಭಾವನೆಯನ್ನು ಕೆದಕುತ್ತವೆ. ಕೃತ್ರಿಮ ನಗರಜೀವನದಿಂದ ನೆಮ್ಮದಿಯ ಗ್ರಾಮ್ಯಜೀವನವನ್ನು ಬಯಸುವ ಗ್ರಾಮಮುಖೀ ಪ್ರವೃತ್ತಿ ಗಾಂಧೀ ಮನೋಭಾವವನ್ನು

ಸಮರ್ಥಿಸುತ್ತದೆ. ನಗರದಲ್ಲಿ ಮನೆಯನ್ನೂ ಕಟ್ಟಲಾಗದ, ಹಳ್ಳಿಯ ಮನೆಯನ್ನು ಮಾರಲೂ ಆಗದ ಸಂದಿಗ್ಧ ಸ್ಥಿತಿಯಲ್ಲಿ ಕಥಾನಾಯಕ ನರಳಿದಂತೆ ಕಂಡರೂ ಆತನ ಅಂತಿಮ ನಿರ್ಧಾರದಲ್ಲಿ ದೃಢತೆಯಿದೆ.

ಅದೇ ರೀತಿ `ಕರ್ತಾರನ ಕಮ್ಮಟ` ಕತೆಯಲ್ಲಿ ಹತ್ತಾರು ವರ್ಷ ಸುಖ ನೀಡಿದ್ದ ಸ್ಕೂಟರ್ ಮಗನಿಗೆ ಮಾಡಿದ ಒಂದು ಸಣ್ಣ ಗಾಯದ ಸೇಪ ಮಾಡಿಕೊಂಡು ಅದರ ವಿರುದ್ಧ ಸೇಡು ತೀರಿಸಿ ಕೊಳ್ಳಬೇಕೆಂಬ ಹಟದಲ್ಲಿ ಊರಾಚೆಗೆ ಹೊತ್ತೊಯ್ಯುವ ಸವಾರ, ಕೊನೆಗೆ ಅದರ ಆಂತರ್ಯದ ಮಾತುಗಳು ಈತನ ಕಿವಿಯಲ್ಲಿ ಮಾರ್ದನಿಸಿ, ತನ್ನ ನಿರ್ಧಾರಕ್ಕೆ ತನಗೇ ನಾಚಿಕೆಯೆನಿಸುವ ಪ್ರಸಂಗದ ನಿರೂಪಣೆ ತುಂಬಾ ಚೇತೋಹಾರಿಯಾಗಿದೆ. ಬಹುತೇಕ ಇದೇ ಶೈಲಿಯ ನಿರೂಪಣೆಯಲ್ಲಿ ಸಾಗುವ ಇವರ ಬಹುಪಾಲು ಕತೆಗಳಲ್ಲಿ ಅಲ್ಲಲ್ಲಿ ನಿರ್ಲಕ್ಷಿಸಬಹುದಾಗಿದ್ದಂತಹ ಕೆಲವು ಸಣ್ಣಪುಟ್ಟ ತಪ್ಪುಗಳು ಆಕಸ್ಮಿಕವಾಗಿ ನುಸುಳಿಕೊಂಡುಬಿಟ್ಟಿವೆ. ಅದೇ ರೀತಿ ಸೂರ್ಯ ಪ್ರಕಾಶನದ ಚೊಚ್ಚಲ ಕೃತಿ ಇವಾಗಿರುವುದರಿಂದ ಪ್ರಕಟಣೆಯಲ್ಲೂ ಕೆಲವು ಮುದ್ರಣ ದೋಷಗಳು ಉಳಿದುಬಿಟ್ಟಿವೆ, ಅವು ಓದಿನ ಓಘದಲ್ಲಿ ತೊಡಕುಂಟು ಮಾಡುತ್ತವೆ.

**—ಕಂನಾಡಿಗಾ ನಾರಾಯಣ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ-೫೭೭ ೫೦೧**

## ೬. *ಅಗಾಂತರ :* ಕಾ. ತ. ಚಿಕ್ಕಣ್ಣ

**ಕಥನ ಪ್ರಕಾಶನ, ೧೫೪, ೨ನೇ ಮಹಡಿ, ೭ನೇ ಮೇನ್, ೭ನೇ ಕ್ರಾಸ್, ಆರ್‌ಪಿಸಿ ಲೇಔಟ್, ವಿಜಯನಗರ, ಬೆಂಗಳೂರು-೪೦, ಪ್ರ.ಮು. ೨೦೦೩, ಪು. ೧೩೨, ರೂ. ೭೦/-**

ಒಡ್ಡು ಒಡೆದ ಮೇಲೆ ನೀರಿನ ಸೆಲೆ ಹೇಗೆ ಎಂತು ಎಂದು ಹೇಳುವುದು ಅಸಾಧ್ಯ. ಮತ್ತೆ ಒಡ್ಡು ಕಟ್ಟಿದರೂ ಅದೇ ನೀರು ಅಲ್ಲಿ ನಿಲ್ಲುವುದು ಕೂಡಾ ಅಸಾಧ್ಯ. ತಾನೇ ರಚಿಸಿಕೊಂಡ ಒಡ್ಡು ಒಡೆದಾಗ, ತಾನೇ ಮತ್ತೆ ಒಡ್ಡಿನೊಳಗಣ ವ್ಯಕ್ತಿಯಾಗಿ ಸೇರಿಕೊಳ್ಳುವುದಕ್ಕೆ ಪ್ರಯತ್ನವೂ ಬಾರದಂತಾಗಿ, ಕೇವಲ ನಿಸರ್ಗದ ಉಸಿರಾಡುವ ಜೀವ ಮಾತ್ರವಾಗುವ ಪರಿಯಿಂದ ಒಡಗೂಡಿದ ಕಥೆಗಳ ಸಂಕಲನ 'ಅಗಾಂತರ.'

`ಅಗಾಂತರ`ದಲ್ಲಿ ಮಾನವೀಯ ಮಗ್ಗುಲಗಳಿಗೆ ಸಾಕ್ಷಿಯಾಗುತ್ತ ಹೋಗುವ ಕಥಾಪಾತ್ರಗಳು ವಿರೂಪವಾಗಿ, ಓದುಗನಿಗೆ ರೂಪ ನೀಡುವ ಕೆಲಸವನ್ನು ಮಾಡುತ್ತವೆ. ಈ ಸಂಕಲನದ ಎಲ್ಲ ಕಥೆಗಳಲ್ಲೂ ಒಂದು ವಿರೂಪ ಪಾತ್ರ, ಘಟನೆಗಳು ಘಟಿಸುವ ಕಾರಣವಾಗುತ್ತದೆ. ಹಾಗೆಯೇ ಕಡೆಯಲ್ಲಿ ಕರುಣೆಗೊಳಪಡುವ ಈ ಪಾತ್ರ ಪರಂಪರೆಯ ಸಂಕೇತವಾಗುತ್ತದೆ. ಜೀವನ ನಂಬಿಕೆಗಳ ಪುಟ್ಟ ಆಘಾತವನ್ನು ಎಳೆವಳೆಯಾಗಿ ವಿಸ್ತರಿಸುವ ಕಥನಶೈಲಿ, ಮತ್ತೆ ಅದಕ್ಕೆ ಸಹಸ್ಪಂದಿಯಾಗಿ ಸಾಗುವ ಹಳ್ಳಿಗಾಡಿನ ಪರಿಸರ ವರ್ಣನೆ, ಕಥಾಪಾತ್ರದ ಜತೆಗೆ ಓದುಗನ ಪಯಣ ಸಾಗುತ್ತದೆ. ಓದುಗನ ಈ ಪಯಣ ಕೂಡಾ ಅಗಾಂತರವೇ!

ಈ ಸಂಕಲನದಲ್ಲಿ ಎಂಟು ಕಥೆಗಳಿವೆ. ಯಾವ ಕಥೆಯೂ ಮೇಲೆ ತಿಳಿಸಿದ ಕಥಾಶೈಲಿಯಿಂದ ಹೊರತಾಗಿಲ್ಲ. ಹೀಗಾಗಿ ಎಂಟೂ ಕಥೆಗಳನ್ನು ಓದಿದಾಗ, ಒಂದು ಸುಂದರ ಕಾದಂಬರಿ ಓದಿದಂಥ ಅನುಭವ ಬಾರದೇ ಇರದು. ಒಂದು ಕಥೆಯನ್ನು ಓದಿ ಮುಗಿಸಿ, ಮತ್ತೊಂದು ಕಥೆಯನ್ನು ಓದಲು ಪ್ರಾರಂಭಿಸಿದರೆ, ಅದು ರಿಲೇ ಓಟದಂತೆ ಸಾಗುತ್ತದೆ.

`ಜಪದಕಟ್ಟೆ`, `ಸತ್ಯವತಿ`, `ಜೆಳ್ಳಕ್ಕಿಸಾಲು` ಹೀಗೆ ಸಾಗುತ್ತ `ಹಸಿರು ಹರಳಿನುಂಗುರ`ಕ್ಕೆ ರಿಲೇ ಮುಕ್ತಾಯವಾಗುತ್ತದೆ. ಕಥೆಗಳ ಕೃಷಿಯಲ್ಲಿ ಕಾ. ತ. ಚಿಕ್ಕಣ್ಣ ಉತ್ತಮ ಕೃಷಿಕರು.

**—ಶ್ರೀಪತಿ ಮಂಜನಬೈಲು, ಅನಂತಮುರಳಿ, ಪ್ಲಾಟ್ ನಂ. ೧೬೫, ಗುರುಪ್ರಸಾದನಗರ, ಬೆಳಗಾವಿ-೬**

## ೭. ಎಚ್ಚೆತ್ತ ಹಿಂದುಸ್ಥಾನ : ಹರ್ಡೇಕರ ಮಂಜಪ್ಪ

ಸಂ. ಗುರುಲಿಂಗ ಕಾಪಸೆ, ಪ್ರಗತಿ ಗ್ರಂಥ ಪ್ರಚಾರ ಸಮಿತಿ, ಬೆಳಗಾವಿ, ದ್ವಿ.ಮು. ೨೦೦೧, ಪು. ೮೧, ರೂ. ೨೫/-

ಹರ್ಡೇಕರ ಮಂಜಪ್ಪನವರು ತಮ್ಮ ೬೧ ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ೧೯೪೬ ರಲ್ಲಿ ಪ್ರಗತಿ ಗ್ರಂಥ ಪ್ರಚಾರ ಸಮಿತಿಯನ್ನು ಹುಟ್ಟುಹಾಕಿ 'ಎಚ್ಚೆತ್ತ ಹಿಂದುಸ್ಥಾನ' ಬರೆದರು. ಅದನ್ನು ಮರು ಮುದ್ರಣಗೊಳಿಸಿದ್ದು ಸಮಿತಿಯ ಸದ್ಯದ ಚೇರಮನ್ನರಾದ ಬ. ಗಂ. ತುರಮುರಿಯವರು. ಬೆನ್ನುಡಿಯಲ್ಲಿ ಐ. ಎಂ. ವಿಠ್ಠಲಮೂರ್ತಿಯವರ ಬೆಲೆಯುಳ್ಳ ಮಾತಿದೆ : "ಹರ್ಡೇಕರ ಮಂಜಪ್ಪನವರು ಹುಟ್ಟಿದ್ದು ವ್ಯಕ್ತಿಯಾಗಿ, ಬೆಳೆದದ್ದು ತತ್ವವಾಗಿ." ಅದರ ಪ್ರಯೋಗವೇ ಈ ಕೃತಿ.

ಹರ್ಡೇಕರ ಅವರು ಮಹಾತ್ಮನಾಗಿ ಭಾರತೀಯ, ಶರಣನಾಗಿ ಕನ್ನಡಿಗ. ಇವೆರಡೂ ವ್ಯಕ್ತಿತ್ವ ಇವರ ಕೃತಿಯುದ್ದಕ್ಕೂ ಹರಿದಿವೆ. ಅದಕ್ಕಾಗಿ ಒಂದು ಕೈ ಗಾಂಧಿ ಒಂದು ಕೈ ಬಸವಣ್ಣ ಎಂಬುದೆ ಮಂಜಪ್ಪನವರ ರೂಪ. ಭಾರತದ ಬಗೆಗಿನ ಪ್ರೀತಿ, ಭಾರತೀಯರಲ್ಲಿ ಬೆಳೆಯಬೇಕಾದ ಅರಿವು ಇವುಗಳನ್ನು ಮಂಜಪ್ಪ ಇಲ್ಲಿ ವಿವರಿಸುತ್ತಾರೆ. ರಾಷ್ಟ್ರನೇತಾರರ ಕಿರುಪರಿಚಯ ಒಳಪುಟಗಳಲ್ಲಿದೆ. ಸ್ವಾತಂತ್ರ್ಯದ ಕೊನೆ ಗಳಿಗೆ (೧೯೪೬) ಆಗ 'ಪಾಕಿಸ್ಥಾನ'ದ ರೂಪ ಬೀಜ-ಮರವಾಯಿತು. ಭಾರತೀಯ ಪ್ರಾಚೀನ ಅರಿವಿನೆಲ್ಲಿ ಜ್ಞಾನದ ವಿಕಾಸಗಳನ್ನು ಇಲ್ಲಿ ಸ್ಮರಿಸಲಾಗಿದೆ.

ಮಂಜಪ್ಪನವರು ತುಂಬ ಆಶಾವಾದ ತಳೆದಿದ್ದ 'ಹಿಂದುಸ್ಥಾನ' ಎತ್ತ ಸಾಗುತ್ತಿದೆ ಎಂಬುದನ್ನು ಈಗ ನೆನೆದು ನೋವಾಗುವದು ಸಹಜ. ಬದುಕನ್ನು ಅಗ್ನಿಪರೀಕ್ಷೆಯಲ್ಲಿ ಆರಂಭಿಸಿ, ವಿಷಮತೆಯನ್ನು ಅರಿವಿನೆತ್ತರದಿಂದ ಎದುರಿಸಿ ಮಂಜಪ್ಪ ಮಹಾತ್ಮರಾದರು. ಅವರ ಉನ್ನತ ಭಾವನೆಗಳನ್ನು ನಮ್ಮ ಜನ ಅರ್ಥೈಸಿಕೊಳ್ಳಬೇಕು.

**—ಬ. ಸೋ. ಗೊರವರ, ಕನ್ನಡ ವಿಭಾಗ, ಜೆ. ಟಿ. ಕಾಲೇಜ, ಗದಗ**

## ಸಂಕಲನ : ಅನಿಸಿಕೆ

೧. ಸಂಕಲನ-೧೩ ಬಂದಿತು. ಓದಿದೆ. ಚೆನ್ನಾಗಿ ಬಂದಿದೆ. ಮುಖಪುಟ ಈ ಬಾರಿಯದು ಬಹಳ ಚೆನ್ನಾಗಿದೆ. ಒಳಗೆ ಲೇಖನಗಳು ಕೂಡಾ ಚೆನ್ನಾಗಿವೆ. ನಿಮ್ಮ 'ಕಡೇಪುಟ', ಎನ್ಕೆ ಬರೆದ ಗೆಳೆಯರ ಬಳಗದ ನೆನಪುಗಳು, ಅರವಿಂದ ಚೊಕ್ಕಾಡಿ ಪ್ರತಿಕ್ರಿಯೆ ಇತ್ಯಾದಿ ಲೇಖನಗಳನ್ನ ಇಷ್ಟಪಟ್ಟೆ.

**– ಪ್ರಸನ್ನ, ಹೆಗ್ಗೋಡು**

೨. ಸಂಕಲನ-೧೩ ಹೊಸ ಕವಚ ತೊಟ್ಟು ಬಂದಿತು. ಕವರ್ ಚೆನ್ನಾಗಿದೆ, ಡೀಸೆಂಟ್ ಆಗಿದೆ. ಸುಮಂಗಲಾ ಅವರು ತಮ್ಮ 'ನನ್ನ ಅಪ್ಪ ನನ್ನ ಅಮ್ಮ' ಲೇಖನದಲ್ಲಿ ಇನ್ನೂ ಕೊಂಚ ಆಳ-ವಿಸ್ತಾರ-ತೀವ್ರತೆಗಳನ್ನ ಒಳಗೊಳ್ಳಬೇಕಿತ್ತು ಅನ್ನಿಸಿತು. ಮಹತ್ವಾಕಾಂಕ್ಷಿಯಾಗಿ ಶುರುವಾಗಿ ಲೇಖನ ಕಡೆಗೆ ತೀರಾ ನಿರಾಶೆಗೊಳಿಸುತ್ತದೆ. **– ಡಾ. ಪ್ರಹ್ಲಾದ ಅಗಸನಕಟ್ಟೆ, ಹುಬ್ಬಳ್ಳಿ**

೩. ಅರವಿಂದ ಚೊಕ್ಕಾಡಿಯವರ ಲೇಖನ ಹಿಡಿಸಿತು. 'ಜಾಗತೀಕರಣ'ದ ಸಾಧಕ ಬಾಧಕಗಳೆರಡನ್ನೂ ಇಬ್ಬರು ಪ್ರಾಮಾಣಿಕ ಚಿಂತಕರು ಬರೆದಾಗಿದೆ. ಈ ಚರ್ಚೆಗೆ ವೇದಿಕೆ ಸಜ್ಜು. ಇದೇ ರೀತಿಯ ತೂಕದ, ಅನುಭವದ ಬಲವಿರುವ ಲೇಖನಗಳು ಪ್ರತಿ ಸಂಚಿಕೆಯಲ್ಲಿ ಬಂದರೂ ಬೇಸರವಿಲ್ಲ. ನಮ್ಮ ತುಕ್ಕು ಹಿಡಿದ ಕ್ರಿಯಾಶೀಲತೆಯೂ ಹದನಾದೀತು. ನಮ್ಮ ಪ್ರಾಮಾಣಿಕ ಪ್ರಯತ್ನಗಳು ಸೋತಾಗ ಅಂಕಿ ಅಂಶಗಳೊಂದಿಗೆ ಹೋರಾಡಲು ಸಾಧ್ಯವಾದೀತು. ಅಂಥ ಹೋರಾಟ ಬರೇ ಜಯಕಾರವನ್ನೇ ಹೋರಾಟವೆನ್ನುವಷ್ಟು ಅಥವಾ ಅನುನಯದಿಂದ ಉನ್ನತಿ ಹೊಂದುವದೇ

ಮಾರ್ಗವಾಗಿರದಷ್ಟು ನಮ್ಮ ದೇಸಿ-ಮೂಲ ಸತ್ವ-ಸೊಗಡು ಅರಳೀತು. ಹಾಗಾದರೆ ಜಾಗತಿಕ ಇತಿಹಾಸದಲ್ಲಿ ಉಲ್ಲೇಖನೀಯವಾಗಬಲ್ಲ ಒಂದು ಪುಟ ನಾವೂ ಬರೆಯುವಂತಾಗಬಹುದು.

**– ರಾ. ಕ. ನಾಯಕ, ಬೆಳಗಾವಿ**

೪. ಈ ಸಲದ ಮುದ್ದಾದ ವಿನ್ಯಾಸದ, ಮಂದ ಬಣ್ಣದ, ಕನ್ನಡ ಅಂಕಿಗಳಿಂದ ಕೂಡಿದ, ಮುಗ್ಧ ಮಗುವಿನಂತೆ ಕಾಣುವ ಸಂಕಲನ-೧೩ ತಲುಪಿತು. ಸಂತಸಪಟ್ಟೆ. The Man Upstairs ಇಂಗ್ಲಿಶ್ ನಾಟಕದ ಅನುವಾದ 'ಆ ಮನೆಯವನು' ತುಂಬ ಚೆನ್ನಾಗಿ ಬಂದಿದೆ. ನನ್ನ ವಿದ್ಯಾರ್ಥಿಗಳಿಗೂ ಓದಲು ಕೊಟ್ಟೆ. **– ಡಾ. ಮಹಾಂತೇಶ ಮಲ್ಲನಗೌಡರ, ಕೊಪ್ಪಳ**

೫. ಸಂಕಲನ-೧೩ ತಲುಪಿತು. ಸಾಹಿತ್ಯದ ವಿವಿಧ ಪ್ರಕಾರಗಳನ್ನು ಹೊಸ ಬಗೆಯ ಶಿಸ್ತಿಗೆ ಒಳಪಡಿಸುತ್ತ ತೂಕವಾದುದನ್ನು ಒಳಗೊಳ್ಳುವ ಇಲ್ಲಿನ ಒಟ್ಟು ವಿನ್ಯಾಸ ಪ್ರಿಯವಾಯಿತು.

**– ಬಸವರಾಜ ವಕ್ಕುಂದ, ಧಾರವಾಡ**

೬. ಸಂಕಲನ-೧೩ ರಲ್ಲಿ ಪ್ರಕಟವಾದ ಎಲ್. ವಿ. ಶಾಂತಕುಮಾರಿ ಅವರ 'ಅಲ್ಲಮಪ್ರಭು ಮತ್ತು ಶ್ರೀಸಾಮಾನ್ಯ' ಲೇಖನ ಬಹಳ ಹಿಡಿಸಿತು. ಅಲ್ಲಮನ ಅಸಾಧಾರಣ ಪ್ರತಿಭೆ ಅದ್ಭುತವಾದದ್ದು. ಮನುಷ್ಯನ ಬುದ್ಧಿಶಕ್ತಿ ವೈಚಾರಿಕವಾಗಿ, ಆಧ್ಯಾತ್ಮಿಕವಾಗಿ, ತಾತ್ವಿಕವಾಗಿ ತಲುಪಬಹುದಾದ ಮಟ್ಟವನ್ನು ಅಲ್ಲಮ ಎಂದೋ ತಲುಪಿದ್ದಾನೆ. **– ವ್ಹಿ. ಎ. ಮಾಚಕನೂರ, ಬೆಂಗಳೂರು**

೭. ಈ ದಿನ ಬೆಳಿಗ್ಗೆ ನನಗೆ ನಂಬಲೂ ಸಾಧ್ಯವಾಗದ ಸಂಗತಿಯೇನೆಂದರೆ ನನ್ನೊಂದು ಪುಡಿಕಾಸು ಪುಂಡಿಪಲ್ಲೆ ಲೇಖನಕ್ಕೆ ತಮ್ಮಿಂದ ೧೦೦ ರೂಪಾಯಿ ಎಂ. ಓ. ಬಂದದ್ದು! ಧನ್ಯವಾದಗಳು ಅಂತ ಹೇಳಲೂ ತೊದಲಿಸುವ ಪ್ರಸಂಗ ನನ್ನ ಪಾಲಿಗೆ ಬಂದಿದೆ. ಧ-ನ್ಯ-ವಾ-ದ-ಗ-ಳು!

**– ಜಿ. ಎಚ್. ಹನ್ನೆರಡುಮಠ, ಬೆಂಗಳೂರು**

೮. ಲೇಖಕರಿಗೆ ಗೌರವಧನವೆಂದು ಪ್ರತಿ ಲೇಖನಕ್ಕೆ ೧೦೦ ರೂಪಾಯಿ ಕೊಟ್ಟು ಸಂಕಲನವನ್ನು ನಡೆಸಲು ಸಾಧ್ಯವಾಗುತ್ತದೆಯೇ? ನಮಗೆ ಗೌರವಧನ ಬೇಕಿಲ್ಲ. ಅದು ಇರದಿದ್ದರೂ ಪರವಾಯಿಲ್ಲ. ಆದರೆ 'ಸಂಕಲನ' ಸುಸೂತ್ರವಾಗಿ ನಡೆದು ಬರಬೇಕೆಂಬುದು ನನ್ನ ಹಾಗೂ ನನ್ನಂತಹ ಅನೇಕ ಅಭಿಮಾನಿಗಳ ಅಭಿಮತ. ಅನೇಕ ರೀತಿಯ ವಾದ ವಿವಾದಗಳಿಗೆ ವೇದಿಕೆಯಾಗಿರುವ, ಆಗುತ್ತಿರುವ ಅನೇಕ ಪತ್ರಿಕೆಗಳು, ನಿಯತಕಾಲಿಕೆಗಳು ಹುಟ್ಟಿಕೊಳ್ಳುತ್ತಲೇ ಇರುವುದಾದರೂ ಸಂಪೂರ್ಣ Literature with capital 'L' ಎನ್ನುವಂತಹ, ವಿಚಾರಗಳಿಗೇ ಮೀಸಲಿರುವ 'ಸಂಕಲನ'ದಂಥ ಪತ್ರಿಕೆಗಳು, ನಿಯತಕಾಲಿಕೆಗಳು ನಮ್ಮ ಕನ್ನಡದಲ್ಲಿ ಬೆರಳೆಣಿಕೆಗೂ ಸಿಗಲಾರವು. ಪತ್ರಿಕೆಯ ಚಂದಾ ಹಣವನ್ನು ೨೦೦ ರೂಪಾಯಿ ಮಾಡಬಹುದಲ್ಲವೇ? ಮಾಡಿ. **– ಎಲ್. ವಿ. ಶಾಂತಕುಮಾರಿ, ಬೆಂಗಳೂರು**

೯. ಲೇಖನಗಳಿಗೆ ೧೦೦ ರೂಪಾಯಿ ಸಂಭಾವನೆ ಕೊಡುವ ತಮ್ಮ ನಿರ್ಧಾರವನ್ನು ಮರುಪರಿಶೀಲಿಸಿ. ಕೈ ಬಿಡುವುದು ಒಳ್ಳೆಯದೆಂದು ನನ್ನ ಅನಿಸಿಕೆ. ಪತ್ರಿಕೆ ಬಹಳಷ್ಟು ದಿನ ಉತ್ತಮವಾಗಿ ಬಾಳಬೇಕು. ಕನ್ನಡದ ಯಾವ ಲೇಖಕರೂ ತಮ್ಮ 'ಸಂಕಲನ' ಪತ್ರಿಕೆಯಂಥ 'ಸಂಸ್ಥೆ'ಯಿಂದ ಸಂಭಾವನೆ ನಿರೀಕ್ಷಿಸುತ್ತಾರೆಂದು ತೋರುವುದಿಲ್ಲ. ದಯವಿಟ್ಟು ಈ ಕುರಿತು ಗಂಭೀರವಾಗಿ ಚರ್ಚಿಸಿ ನಿರ್ಧರಿಸಿ. ಸಂಭಾವನೆಗಿಂತ ಪತ್ರಿಕೆಯ ಉಳಿವು ಮುಖ್ಯ. ನನ್ನ ಲೇಖನಗಳು ಪ್ರಕಟವಾದಾಗಲಂತೂ ಸಂಭಾವನೆ ಕಳಿಸಲೇಬೇಡಿ. ಈ ವರ್ಷದ ಚಂದಾ ಹಣ ಕಳಿಸುತ್ತಿದ್ದೇನೆ. ಮುಂದೆಯೂ ನೆನಪಿನಿಂದ ಕಳಿಸುತ್ತೇನೆ.

**– ಎಸ್. ಎಸ್. ಹಿರೇಮಠ, ಹರಪನಹಳ್ಳಿ**

೧೦. 'ಸಂಕಲನ'ವನ್ನು ತಪ್ಪದೇ ಓದುತ್ತಿದ್ದೇನೆ. ಇತ್ತೀಚೆಗೆ ಮತ್ತಷ್ಟು ಆಕರ್ಷಕವಾಗಿ ಭಾವಸಮೃದ್ಧವಾಗಿ, ಬುದ್ಧಿಪ್ರೇರಕವಾಗಿ ಖುಶಿ ಕೊಡುತ್ತಿದೆ. ಸಂಪಾದಕರಿಬ್ಬರಿಗೂ ಅಭಿನಂದನೆಗಳು.

**– ಡಾ. ಗೀತಾ ವಸಂತ, ಹಾಸಣಗಿ**

# ಕಡೇಪುಟ : ಸಿದ್ಧಲಿಂಗ ಪಟ್ಟಣಶೆಟ್ಟಿ

ನಮ್ಮನ್ನು, ನಮ್ಮ ಸುತ್ತಲಿನ ನಮ್ಮದಾದ ಎಲ್ಲವನ್ನೂ ಪ್ರತಿನಿಧಿಸುವ ನಮ್ಮ ಶಬ್ದಗಳನ್ನ, ಅವು ಮಿಡಿಯುತ್ತಿರುವ ಧ್ವನಿಗಳನ್ನ ನಾವು ಮರ್‍ಯಾಕತ್ತೇವಿ; ಅವು ಸಯ್ತು ತಮ್ಮಷ್ಟಕ್ಕ್ಅ ಮರಿ ಆಗಾಕ್ಹತ್ಯಾವು, ಮರತ ಹೋಗಾಕ್ಹತ್ಯಾವು. ಮರಿ ಇದ್ದಿದ್ದು ಹಿರಿ ಆಗಬೇಕಿತ್ತು, ಹೀಚ್ ಇದ್ದಿದ್ದು ದೋರ್ ಆಗಬೇಕಿತ್ತು, ಹಿರಿಹಿರಿ ಹಿಗ್ಗೂಹಂಗ ಹಿರಿಯದು ಆಗಬೇಕಿತ್ತು. ಅದರ ಬದಲಿ ಈಗ ಮರಿ ಕರಗಿ ಕರಿನೀರಿಗೆ ಹಾಕಿದ್ಹಂಗ ಕಿರಿ ಆಗಾಕ್ಹತ್ತೇತಿ. ತಮ್ಮನ್ನ ತಾವ್ನ್ಅ ಹೊಸಬರು, ನವೀನರು, ಮಾಡರ್ನ್ ಮಂದಿ ಅಂದುಕೊಳ್ಳುವವರಿಗೆ ಕಿರಿಕಿರಿ ಆಗಾಕ್ಹತ್ತೇತಿ.

ಇದು ಬ್ಯಾಸರದ ಸಂಗತಿ. ಇತಿಹಾಸಕ್ಕ, ಸಂಸ್ಕೃತಿಗೆ ವಿನಾಶದ ವಿಷಾದದ ವಿಷಯ; ಸಾಹಿತ್ಯಕ್ಕ, ಭಾಷಾಶಾಸ್ತ್ರಕ್ಕ ಅನಾಹುತದ ಅಪಾಯದ, ಮುಂದಿನ ದಿನಮಾನಗಳಲ್ಲಿ ಶ್ರಮಸಾಧ್ಯ ಆಗಿರುವಂಥ ಕೆಲಸ. ಕಳೆದುಹೋದ ಶಬ್ದಗಳನ್ನ ಕೇಳಾವ್ರ್‌ಅ ಇಲ್ಲದಿದ್ದರ ಹೇಳಾವರಂತೂ ಮೊದಲ್ಅ ಇಲ್ಲ. ಇನ್ನ ತಿಳಕೋಬೇಕ ಅನ್ನವರಂತೂ ಇಲ್ಲವೇ ಇಲ್ಲ.

ಈಗಿನ ಭಾಳ ಮಂದಿ ಮುಂಜಾನೆ ಎದ್ದ ಕೂಡಲೇ ಟಾಯ್‌ಲೆಟ್‌ಗೆ ಹೋಗ್ತಾರ. ಕೆಲವರು ಪಾಯ್‌ಖಾನೆಗೆ ಹೋಗ್ತಾರ. ನಾವು ಯಾದವಾಡದಾಗ ಊರಮುಂದ ಹೋಗತಿದ್ದೆವು. ಹಳ್ಳದ ಕಡೆ ಹೋಗತಿದ್ದೆವು. ಮನಗುಂಡಿಯೊಳಗ ಹಿತ್ತಲ ಕಡೆ ಹೋಗತಿದ್ದೆವು. ಕೆಲವು ಮಂದಿ ಬೇಲೀ ಕಡೆ, ಬಯಲ ಕಡೆ, ಅಗಸೀ ಕಡೆ, ಹೊಳೀ ಕಡೆ, ದಿಡ್ಡೀ ಕಡೆ, ಮಡ್ಡೀ ಕಡೆ ಹೋಗ್ತಾರ. ಇನ್ನ ಕೆಲವರು ತಂಬಗೀ ತೊಗೊಂಡು, ಚರಗೀ ತೊಗೊಂಡು, ಚೆಂಬೂ ತೊಗೊಂಡು ಇತ್ಯಾದಿ ಹೋಗ್ತಾರ. ಉಳಕೀ ಮಂದಿ ಹೊರಕಡೆಗೆ (ಹೊರಗಡೆಗೆ ಅಲ್ಲ) ಹೋಗ್ತಾರ. ಸುಧಾರಿಸಿದವರು ಕೆಲವರು ನಳದ ಕೆಳಗೂ ತೊಳಕೊಳ್ಳವರು ಅದಾರ. ಹಿಂಗ್ಅ ನಮ್ಮವರು ಎಷ್ಟು ವೈವಿಧ್ಯಪೂರ್ಣವಾಗಿ ಬಹಿರ್ದೆಸೆಗೆ ಹೋಗ್ತಿದ್ದರು. ಹಿರ್‍ಯಾರಾದರ ಎದ್ದಿರ್‍ಯಾ, ಎದ್ದೀವಿ ಎದ್ದಿರ್‍ಯಾ, ಶರಣ್ರಿ ಅಂತೆಲ್ಲಾ ಅನಕೋಂತ ಧೋತರದ ಚುಂಗು ಎತ್ತಿ ಹಿಡಕೊಂಡು ಹೋಗ್ತಿದ್ದರು. ಹುಡುಗೂರಾದರ ಮನೀ ಮುಂದ ಕಾವಲೀ ಕಡೆ, ತ್ಯಾಟದ ಬೇಲೀ ಕಡೆ ಹೋಗ್ತಿದ್ದರು. ಹೆಣ್ಮಕ್ಳಂತೂ ನಮ್ಮ ಗ್ರಾಮಭಾರತದೊಳಗ ಇವತ್ತಿಗೂ ಹಗಲ ಹೊತ್ತಿನ್ಯಾಗ ಹೇಲಾಕ ಹೋಗೂಹಂಗ್ಅ ಇಲ್ಲ. ಅದರ ಸಲುವಾಗಿ ಅವರು ತಮ್ಮ ಇಡೀ ಆರೋಗ್ಯ-ದೇಹಸ್ಥಿತಿಗಳನ್ನೆಲ್ಲಾ ಹೊಂದಿಸಿಕೊಳ್ಳಾಕ್ಅ ಬೇಕು. ಹೊತ್ತು ಮುಳುಗಿದ ಮ್ಯಾಲ, ಕತ್ತಲಾದ ಮ್ಯಾಲ ಅವರು ಊರ ಹೊರಗ, ಸರುವಿನ ಕಡೆ, ಬುರುಜಿನ ಬಾಜೂಕ, ಅಗಸೀ ಮುಂದ, ಅಗಳಗಟ್ಟೀ ಕಡೆ ಹೋಗಬೇಕು. ಸಾಧ್ಯ ಇದ್ದಷ್ಟು ಮೂರು-ನಾಕು ಮಂದಿ ಕೂಡಿ ಹೋಗೂದು, ಮನೀ ಸುದ್ದಿ, ಮಂದೀ ಸುದ್ದಿ, ಊರ ಸುದ್ದಿ ಎಲ್ಲಾ ಮಾತಾಡಿ ದೇಹಾ ಮನಸು ಶುದ್ಧೀ ಮಾಡಿಕೊಂಡು ಆದಷ್ಟು ಹಗುರಾಗಿ ಮನಿಗೆ ಬರಬೇಕು. ಇದು ಇವತ್ತಿಗೂ ಉಳಿದು ಬಂದಿರುವಂಥ, ಮಹಾಭಾರತದ ಲೋಹಿಯಾ ಚಿಂತನೆ ಸದಾ ಪ್ರಸ್ತುತವಾಗಿರುವಂಥ ಪ್ರಸಂಗ.

ಹಿಂಗ ಒಂದೊಂದು ವಿಷಯಕ್ಕ, ಪ್ರಸಂಗಕ್ಕ, ವ್ಯಕ್ತಿಗೆ ಸಂಬಂಧಿಸಿದ ಶಬ್ದಗಳು, ಪದಗಳು ಇಲ್ಲಿ ನರಳತಾವು, ಹಾಸಗೀ ಹಿಡಿದು ಇತಿಹಾಸ ಆಗತಾವು. ಅವುಗಳ ಹಿಂದ ಮುಂದ ಸಂದ್ಯಾಗ ಮಗ್ಗಲದಾಗ ಅರಳಿದ ಸಂಸ್ಕೃತಿಯ ಹೂ ಹಣ್ಣು ಬೀಜಗಳು ಈಗ ಯಾರ ಕಣ್ಣಿಗೂ ಕಾಣದ್ಹಂಗ ಮರಿ ಆಗ್ಯಾವು. ಇಂಥಾ ಶಬ್ದಗಳನ್ನ ಸಂಗ್ರಹಿಸುವ ಮತ್ತು / ಅಥವಾ ಸಾಧ್ಯವಾದರ ಅವುಗಳನ್ನು ಬಳಸುವ ಅವು ಒಡನುಡಿಯುವ ಇತಿಹಾಸಗಳನ್ನ, ಉಸುರುವ ಚರಿತ್ರೆಗಳನ್ನ, ಹೇಳುವ ಕತೆಗಳನ್ನ, ತೋರಿಸುವ ನಾಗರಿಕತೆಗಳನ್ನ, ಕಟ್ಟುವ ಸಂಸ್ಕೃತಿಗಳನ್ನ ಕಣ್ಣಾರೆ ನೋಡಬೇಕು, ಕಿವಿಯಾರೆ ಕೇಳಬೇಕು, ಎದಿಯಾರೆ ತುಂಬಿಕೋಬೇಕು.

SANKALANA: RNI No. KARKAN 14160/10/1/2002-TC

ಸಂಕಲನ : ೧೪ ಮಾರ್ಚ್ ೨೦೦೪

ಸಂಪುಟ ೩, ಸಂಚಿಕೆ ೨

ಸಂಪಾದಕರು : ಸಿದ್ಧಲಿಂಗ ಪಟ್ಟಣಶೆಟ್ಟಿ + ಹೇಮಾ ಪಟ್ಟಣಶೆಟ್ಟಿ



• ರೇಖಾ ವಿಷ್ಣುಮೂರ್ತಿ

• ಎಂ. ಡಿ. ಗೋಗೇರಿ • ಶಂಕರ ತಲ್ಲೂರ

• ಎಸ್. ಎಸ್. ಹಿರೇಮಠ

• ಜಿ. ಪಿ. ಬಸವರಾಜು • ಎ. ಆರ್. ನಾಗಭೂಷಣ

• ಮಾಧವ ಕುಲಕರ್ಣಿ

• ಗೀತಾ ವಸಂತ • ಕೇಶವ ಶರ್ಮ ಕೆ.

• ಬಿ. ಟಿ. ದೇಸಾಯಿ



ಎಚ್. ದಂಡಪ್ಪ ದುಷ್ಯಂತ ನಾಡಗೌಡ

ವೆಂಕಟೇಶ ಮಾಚಕನೂರ ಕಂನಾಡಿಗಾ ನಾರಾಯಣ

ಶ್ರೀಪತಿ ಮಂಜನಬೈಲು ಬ. ಸೋ. ಗೊರವರ



ಪ್ರಸನ್ನ

ಪ್ರಹ್ಲಾದ ಅಗಸನಕಟ್ಟೆ

ರಾ. ಕ. ನಾಯಕ ಮಹಾಂತೇಶ ಮಲ್ಲನಗೌಡರ

ಬಸವರಾಜ ವಕ್ಕುಂದ

ವ್ಹಿ. ಎ. ಮಾಚಕನೂರ ಜಿ. ಎಚ್. ಹನ್ನೆರಡುಮಠ

ಎಸ್. ಎಸ್. ಹಿರೇಮಠ

ಗೀತಾ ವಸಂತ



ಸಿದ್ಧಲಿಂಗ ಪಟ್ಟಣಶೆಟ್ಟಿ



ಸಂಕಲನ ಪ್ರಕಾಶನ

ಹೂಮನೆ, ಶ್ರೀದೇವಿನಗರ, ವಿದ್ಯಾಗಿರಿ, ಧಾರವಾಡ ೫೮೦ ೦೦೪